# Karnataka Lochana

Vol. 2 June 1989 No. 1


# ಕರ್ನಾಟಕ ಲೋಚನ


ಸಂಪುಟ ೨ ಜೂನ್ ೧೯೮೯ ಸಂಚಿಕೆ ೧




## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

**B.M.Sri. Memorial Foundation**
**Bangalore-19**


Annual Subn.: Rs. 10-00
Subn. for life: 100-00

ವಾರ್ಷಿಕ ಚಂದಾ : ರೂ. ೧೦-೦೦
ಆಜೀವ : ೧೦೦-೦೦

# ‘ ಕರ್ನಾಟಕ ಲೋಚನ ’


## ಸಂಪಾದಕ ಮಂಡಲಿ

ಪ್ರೊ॥ ಎಂ. ವಿ. ಸೀತಾರಾಮಯ್ಯ (ಅಧ್ಯಕ್ಷರು), ಟಿ. ಕೇಶವ ಭಟ್ಟ (ಸಂಪಾದಕರು), ಎನ್. ಎಸ್. ರಾಮಸ್ವಾಮಿ ಅಯ್ಯರ್ (ಸಹಾಯಕ ಸಂಪಾದಕರು).

ಸದಸ್ಯರು : ಪ್ರೊ॥ ಜಿ. ವೆಂಕಟಸುಬ್ಬಯ್ಯ, ಬೆಂಗಳೂರು ; ಡಾ॥ ಪಿ. ವಿ. ನಾರಾಯಣ, ಬೆಂಗಳೂರು; ಡಾ॥ ಎಂ. ಚಿದಾನಂದಮೂರ್ತಿ, ಬೆಂಗಳೂರು; ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ ಬೆಂಗಳೂರು; ಕೆ. ಆರ್. ಗಣೇಶ, ಬೆಂಗಳೂರು; ಡಾ॥ ಆರ್. ಶೇಷಶಾಸ್ತ್ರಿ, ಅನಂತಪುರ ; ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ, ಮೈಸೂರು; ಎಲ್. ಬಸವಾರಾಧ್ಯ, ಬೆಂಗಳೂರು; ಎಸ್. ಪಿ. ಪಾಟೀಲ, ಧಾರವಾಡ ; ಡಾ॥ ಶ್ರೀನಿವಾಸ ಹಾವನೂರ, ಮುಂಬಯಿ ; ಡಾ॥ ಶ್ರೀಕೃಷ್ಣ ಭಟ್ ಅರ್ತಿಕಜೆ, ಮದರಾಸು ; ಡಾ॥ ಬಿ. ರಾಮಚಂದ್ರರಾವ್, ಹೈದರಾಬಾದು ; ಅನಂತಪದ್ಮನಾಭರಾವ್, ಬೆಂಗಳೂರು ; ಡಾ॥ ಕೆ. ಕೆ. ಗೌಡ, ಮದರಾಸು ; ಎಸ್. ಶಿವಣ್ಣ, ಬೆಂಗಳೂರು ; ಪ್ರೊ॥ ವಸಂತ ಕುಷ್ಟಗಿ, ಗುಲಬರ್ಗಾ.


## ಲೇಖನಗಳು–ಟಿಪ್ಪಣಿಗಳು

ಸಂಶೋಧನಾತ್ಮಕ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು – ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು – ಇವುಗಳಿಗೆ ‘ಲೋಚನ’ ಮೀಸಲಾಗಿದೆ.

ಯಾವದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬದಾರರು ; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾದ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ‘ಲೋಚನ’ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಟಿಪ್ಪಣಿಗಳು 1–2 ಪುಟಗಳ ಪರಿಮಿತಿಯಲ್ಲಿರಬಹುದು. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

## ವಿನಿಮಯ ಪತ್ರಿಕೆಗಳು

೧. ಸೋವಿಯತ್ ದೇಶ (ಮದರಾಸು), ೨. ಲಹರಿ (ಮದರಾಸು), ೩. ಅಂಕಣ (ಬೆಂಗಳೂರು), ೪. ಗ್ರಂಥಲೋಕ (ಮೈಸೂರು), ೫. ಅನ್ವೇಷಣೆ (ಬೆಂಗಳೂರು), ೬. ಚೆನ್ನುಡಿ (ಶಿವಮೊಗ್ಗ), ೭. ತರಳಬಾಳು (ಸಿರಿಗೆರೆ), ೮. ಸಾಧನೆ (ಬೆಂಗಳೂರು), ೯-೧೧. ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ವಿಜ್ಞಾನ ಕರ್ನಾಟಕ (ಮೈಸೂರು), ೧೨. ಸುಗುಣಮಾಲಾ (ಉಡುಪಿ), ೧೩. ಗ್ರಾಮ ಕ್ಷೇಮ (ಆನೆಕಲ್).

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು.**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ ; ಆದರೆ ಕಳಿಸಿದರೆ, ‘ಸ್ವೀಕಾರ’ ಭಾಗದಲ್ಲಿ ಗಮನಿಸಲಾಗುವುದು. ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

೭೨/11/9೮೦

ಸದಸ್ಯರಲ್ಲಿ ವಿತರಣೆಗೆ ಮಾತ್ರ

# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ಪತ್ರಿಕೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೫೪, ೩ನೇ ಅಡ್ಡಬೀದಿ, ಗವಿಪುರ ವಿಸ್ತರಣ, ಬೆಂಗಳೂರು-೧೯

ಸಂಪಾದಕ : ಪ್ರೊ॥ ವಿದ್ವಾನ್ ಟಿ. ಕೇಶವ ಭಟ್ಟ

ಸಂಪುಟ ೨ ಜೂನ್ ೧೯೮೯ ಸಂಚಿಕೆ ೧

## ಪರಿವಿಡಿ

# Karnataka Lochana

[Half-Yearly Journal, Published by B.M.Sri. Memor
Foundation, 54, 3rd Cross, Gavipuram Extn, Bangalore-19]

*Chairman, Editorial Board:* Prof. M. V. Seetha Ramiah

*Editor:* Prof. (Vidwan) T. Keshava Bhat

*Vol. II* *June 1989* *No.*

## CONTENTS

## ನ್ನಡದಲ್ಲಿ ವರ್ತಮಾನ ಕಾಲ "ಇದೆ"

—ಡಾ॥ ಸಿ. ಓಂಕಾರಪ್ಪ

'ಇದೆ' ಎಂಬುದು ಮಾತುಮಾತಿಗೆ ಪ್ರಯೋಗವಾಗುವ ನಿತ್ಯೋಪಯೋಗಿ
ರೂಪದ. ಇದು ಪೂರ್ಣಾರ್ಥವನ್ನು ಕೊಡುವ ಮುಖ್ಯ ಕ್ರಿಯಾಪದವೂ ಹೌದು
ತ್ತು ಇತರ ಕ್ರಿಯಾಪದಗಳ ಪರದಲ್ಲಿ ಸೇರುವ ಸಹಾಯಕ ಕ್ರಿಯಾಪದವೂ ಹೌದು.
ು ಎಷ್ಟು ವ್ಯಾಪಕ ಪ್ರಯೋಗವುಳ್ಳುದೋ ಅಷ್ಟೇ ಮಟ್ಟಿಗೆ ಆಶ್ಚರ್ಯಕರವಾಗಿ
ಣತರ, ವೈಯಾಕರಣರ ಕಣ್ಣು ತಪ್ಪಿಸುತ್ತಾ ಬಂದಿರುವ ಕ್ರಿಯಾಪದವೂ ಹೌದು.
ಾವು ಶತಮಾನಗಳಿಂದಲೂ ಇಷ್ಟೊಂದು ವ್ಯಾಪಕ ಬಳಕೆಯಲ್ಲಿರುವ ಇದರ
್ಲೇಷಣೆಯ ವಿಧಿಯ ಬಗ್ಗೆ ಕೇಶಿರಾಜನಂತಹ ಪರಿಣತ ವೈಯಾಕರಣನೂ ಮೌನ
ಸಿದ್ದು ಆಶ್ಚರ್ಯ. ಬಹುಶಃ ಅವನ ಸರಕಾದ 'ಸುಮಾರ್ಗ' ಇದು ಇರಲೇ
ವೋ ಎನಿಸುತ್ತದೆ. ಆಧುನಿಕ ಭಾಷಾವಿಜ್ಞಾನಿಗಳೂ, ಪರಿಣತರೂ ಇದರ
ೇಜಿಗೇ ಹೋಗದಿದ್ದುದು ಇನ್ನೂ ಆಶ್ಚರ್ಯಕರವಾಗಿದೆ. ಇದನ್ನು ಮುಟ್ಟಿದ
ವರು ಇದರ ಕಗ್ಗಂಟಿನಲ್ಲಿ ಸಿಕ್ಕಿಕೊಂಡು ನರಳಿದ್ದಾರೆ. ಆಚಾರ್ಯ ತೀ.ನಂ.ಶ್ರೀ.
ತ್ತು ಡಿ.ಎಲ್.ನ. ರಂತಹ ಸುಪ್ರಸಿದ್ಧ ದಿಗ್ದಂತಿಗಳನ್ನೊಳಗೊಂಡ ಕನ್ನಡ
ಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನ ಸಂಪಾದಕ ಮಂಡಲಿ ಕೂಡ ಇದರ
ೇಜಲನ್ನು ಬಿಡಿಸಲಾಗದೆ ಇದನ್ನು ತಪ್ಪಾಗಿ ವ್ಯಾಖ್ಯಾನಿಸಿದ್ದಾರೆಂದರೆ ಯಾರಿಗಾ-
ೂ ಆಶ್ಚರ್ಯವಾದೀತು. ಸುಪ್ರಸಿದ್ಧ ಭಾಷಾವಿಜ್ಞಾನಿ ಡಾ॥ ಎಚ್. ಎಸ್.
ಗಿರಿಯವರು ಅವರ ವಿದ್ಯಾರ್ಥಿಯಾಗಿ ನಾನು ಇದರ ಬಗ್ಗೆ ಕೇಳಿದ ಪ್ರಶ್ನೆಗೆ
ತ್ತರಿಸುತ್ತಾ, 'ಇದೆ' ಎಂಬುದು ಪೂರ್ಣ ಕ್ರಿಯಾಪದ ನಿಜ. ಆದರೆ ಇದನ್ನು
್ಲೇಷಣೆ ಮಾಡುವ ಕ್ರಮ ಸ್ಪಷ್ಟವಾಗಿ ತಿಳಿದಿಲ್ಲ. 'ಇರ್' ಧಾತು. ಇರ್ > ಇದೆ.
ದರೆ ಇಲ್ಲಿ ಕಾಲವಾಚಕ ಪ್ರತ್ಯಯ ಮತ್ತು ಪುರುಷವಾಚಕ ಪ್ರತ್ಯಯಗಳನ್ನು
ಗಡಿಸಿ ಹೇಳುವುದು ಕಷ್ಟಕರ. ಇರ್ + ದ + ಎ ಎನ್ನಬಹುದೆ? ಅಥವಾ
ು + ಎ ಎನ್ನಬಹುದೆ? It is doubtful ಎಂದು ನಿಲ್ಲಿಸಿದ್ದರು. ಇಷ್ಟು
ರ್ಷಗಳ ವರೆಗೆ ಅಪ್ರಜ್ಞೆಯಲ್ಲಿ ಕುಳಿತಿದ್ದ ಅದು ಈಗ ಇಲ್ಲಿ ಈ ಕೆಳಗಿನಂತೆ
ಮೂಡಿದೆ.

'ಇರು' ಧಾತುವಿನಿಂದ ನಿಷ್ಪನ್ನವಾದ ಈ ಕ್ರಿಯಾರೂಪಗಳ ಪೂರ್ಣ
ಚನೆ (Pattern) ಯನ್ನು ಈ ಕೆಳಕಂಡಂತೆ ಗುರುತಿಸಬಹುದು. ಇವು ನಿಶ್ಚಿತ
ರ್ತಮಾನ ಕಾಲವನ್ನು (Present perfect tense) ಸೂಚಿಸುತ್ತವೆ.

| | | ಏ.ವ. | ಬ.ವ. |
|---|---|---|---|
| ಉತ್ತಮ ಪು. | | ಇದ್ದೇನೆ/ಇದೇನೆ | ಇದ್ದೇವೆ/ಇದೇವೆ |
| ಮಧ್ಯಮ ಪು. | | ಇದ್ದೀಯ/ಇದೀಯ | ಇದ್ದೀರಿ/ಇದೀರಿ |
| ಪ್ರಥಮ ಪು. | ಪುಲ್ಲಿಂಗ | ಇದ್ದಾನೆ/ಇದಾನೆ | ಇದ್ದಾರೆ/ಇದಾರೆ |
| | ಸ್ತ್ರೀ ಲಿಂಗ | ಇದ್ದಾಳೆ/ಇದಾಳೆ | |
| | ನ.ಲಿಂ. | ಇದೆ | ಇವೆ |

ಮೇಲಿನ ರೂಪಗಳಲ್ಲಿ ನಪುಂಸಕಲಿಂಗದಲ್ಲಿ ಮಾತ್ರ ದಕಾರಕ್ಕೆ ದ್ವಿತ್ವವಿಲ್ಲದಿರುವುದೂ ಉಳಿದ ಕಡೆ ದ್ವಿತ್ವವಿಕಲ್ಪವಿರುವುದೂ ಗಮನಾರ್ಹವಾಗಿದೆ.

ನಡುಗನ್ನಡದ ಆರಂಭಕಾಲದಿಂದಲೂ ಇದರ ಪ್ರಯೋಗಗಳು ಸಿಕ್ಕುತ್ತವೆ. ಹಳಗನ್ನಡದಲ್ಲಿ ಆಡುನುಡಿಯಲ್ಲಿದ್ದಿರಬಹುದಾದರೂ ಗ್ರಂಥಸ್ಥಭಾಷೆಯಲ್ಲಿ ಇದರ ಪ್ರಯೋಗಗಳು ಈವರೆಗೆ ಸಿಕ್ಕಿಲ್ಲ. ಅಥವಾ ನನ್ನ ಕಣ್ಣಿಗೆ ಬಿದ್ದಿಲ್ಲ. ನಡುಗನ್ನಡ ಮತ್ತು ಹೊಸಗನ್ನಡದಲ್ಲಿ ಇದರ ಪ್ರಯೋಗಗಳು ಈ ಕೆಳಕಂಡಂತೆ ಇವೆ.

ನಡುಗನ್ನಡ : ಮುಖ್ಯ ಕ್ರಿ. "ಗುರುವಿದೆ, ಲಿಂಗವಿದೆ" (ಅಲ್ಲಮನ ವಚನ)

"ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ" (ಬಸವಣ್ಣನ ವಚನ)

"ಹಿಂದೆ ಮರಳುವೊಡಿದೆ ಕೃತಾಂತನ ಕೊಂತವರಸನ ಮೂದಲೆಯ ವಚನ" (ಕು.ವ್ಯಾ. ದ್ರೋಣಪರ್ವ)

ಸಹಾಯಕ ಕ್ರಿ.ಪ. :

"ದಾಳಿ ಬರುತಿದೆ" (ಕು.ವ್ಯಾ. ವಿರಾಟಪರ್ವ 5–7)

"ಯಂತ್ರ ಹೊಳೆವುತ್ತಿದೆ" ( ,, ಆ. ಪರ್ವ 14–2)

"ಬಾವನ್ನವನು ವೇಷ್ಟಿಸಿ ಭುಜಗವಿದೆ" (ಆ.ಪ. 14–25)

ಹೊಸಗನ್ನಡ : ಮುಖ್ಯ ಕ್ರಿ.ಪ.

"ಪಾತ್ರೆ ಒಲೆಯ ಮೇಲೆ ಇದೆ"

"ಈ ಕೆಳಕಂಡಂತೆ ಇವೆ"

ಸಹಾಯಕ ಕ್ರಿ.ಪ. : "ಹೊತ್ತು ಮುಳುಗುತ್ತಿದೆ"

ಮೇಲಿನ ರೂಪಗಳೊಡನೆ 'ಇರು' ಧಾತುವಿನ ಅರ್ಥದಲ್ಲೇ ಪ್ರಯೋಗವಾಗುವ ಇನ್ನು ಕೆಲವು ಕ್ರಿಯಾಪದಗಳನ್ನು ಇಲ್ಲಿ ಪರಿಶೀಲಿಸಬೇಕಾಗುತ್ತದೆ. ಅವು 'ಅದೇನೆ', 'ಅದಾನೆ' ಇತ್ಯಾದಿ.

ಅವುಗಳ ಪೂರ್ಣ ನಮೂನೆಗಳನ್ನು (Pattern) ಈ ಕೆಳಗೆ ಕೊಟ್ಟಿದೆ.

| | | ಏ.ವ. | ಬ.ವ. |
|---|---|---|---|
| ಉ.ಪು. | | ಅಯ್ದೀನೆ/ಅದೇನೆ | ಅಯ್ದೀವೆ/ಅದೇವೆ |
| ಮ.ಪು. | | ಅಯ್ದಿ/ಅದಿ | ಅಯ್ದೀರಿ/ಅದೀರಿ |
| ಪ್ರ.ಪು. | ಪು.ಲಿಂ. | ಅಯ್ದಾನೆ/ಆದಾನೆ | ಅಯ್ದಾರೆ/ಅದಾರೆ |
| | ಸ್ತ್ರೀ ಲಿಂ. | ಅಯ್ದಾಳೆ/ಅದಾಳೆ | |
| | ನ.ಲಿಂ. | ಅಯ್ತೆ/ಅಯ್ತಿ/ಆದೆ | ಅಯ್ದಾವೆ/ಅದಾವೆ/ಅವೆ |

ಮೇಲಿನ ರೂಪಗಳಲ್ಲಿ 'ಯ್'ಕಾರ ಮತ್ತು 'ದ್'ಕಾರಗಳ ಸಂಯುಕ್ತಾಕ್ಷರ ವನ್ನು 'ಇದ್ದಾನೆ' ಇತ್ಯಾದಿ ರೂಪಗಳ ದಕಾರ ದ್ವಿತ್ವದೊಡನೆ ಹೋಲಿಸಬಹುದಾಗಿದೆ. ದ್ವಿತ್ವದಕಾರವು ಸರಳ ದಕಾರವಾಗಿರುವ ಪರ್ಯಾಯ ರೂಪಗಳಿರುವಂತೆ 'ಯ್' 'ದ್'ಗಳ ಸಂಯುಕ್ತಾಕ್ಷರಗಳಲ್ಲಿ 'ಯ್'ಕಾರ ಲೋಪವಾದ ಪರ್ಯಾಯರೂಪ ಗಳಿರುವುದೂ ಗಮನಿಸಬೇಕಾದ ಅಂಶವಾಗಿದೆ. ಎರಡನೆಯ ಪಟ್ಟಿಯಲ್ಲಿರುವ ರೂಪಗಳು ಗ್ರಾಮ್ಯಪ್ರಯೋಗಗಳಂತೆ ಕಂಡರೂ ಗ್ರಂಥಸ್ಥವಾದ ಶಿಷ್ಟಭಾಷೆಯಲ್ಲೂ ಇವು ಪ್ರಯೋಗವಾಗಿರುವುದನ್ನು ಕಾಣಬಹುದು. ಅಲ್ಲದೆ ನಡುಗನ್ನಡದ ಆರಂಭ ಕಾಲದಿಂದಲೇ ಇವು ಗ್ರಂಥಸ್ಥ ಭಾಷೆಯಲ್ಲಿ ದೊರಕುವುದನ್ನು ನೋಡಿದರೆ ಅದಕ್ಕಿಂತ ಹಿಂದೆ ಎಂದರೆ ಹಳಗನ್ನಡದ ಕಾಲದಲ್ಲೇ ಇವು ಆಡುನುಡಿಯಲ್ಲಿದ್ದಿರಬಹುದೆಂದು ಊಹಿಸಲವಕಾಶವಾಗುತ್ತದೆ. ವಿಶೇಷ ಪರಿಶೀಲನೆಯಿಂದ ಹಳಗನ್ನಡ ಗ್ರಂಥಗಳಲ್ಲಿ ಅಪರೂಪಕ್ಕಾದರೂ ಕಣ್ಣಿಗೆ ಬೀಳಲೂಬಹುದು. ಸದ್ಯಕ್ಕೆ ನಡುಗನ್ನಡ ಕಾಲಕ್ಕಂತೂ ಗ್ರಂಥಸ್ಥಭಾಷೆಯಲ್ಲಿ ಇವು ತಲೆಹಾಕುತ್ತಿದ್ದುದಕ್ಕೆ ಆಧಾರಗಳಿವೆ. ಅದರ ಮಾತಿರಲಿ. ಕುಮಾರವ್ಯಾಸನಂತಹ ಮಹಾಕವಿಯೇ ಇವುಗಳಲ್ಲಿ ಒಂದೆರಡನ್ನು ಬಳಸಿರುವುದು ಅವು ಶಿಷ್ಟಪ್ರಯೋಗಗಳೇ ಎಂಬುದನ್ನು ಎತ್ತಿ ತೋರಿಸುತ್ತದೆ.

ಉದಾ :

"ನಡುಹಗಲ ಮಾರ್ತಾಂಡನಂತಿರೆ ತೋಱುತ್ತೈದನೆ" (ಕರ್ಣಪರ್ವ 14–36)

"ಸುತ್ತಬರುತ್ತೈದಾರೆ ದಂತಿಯ ಹತ್ತಲರಿಯದೆ" (ಗದಾಪರ್ವ 12–8)

ಇನ್ನು ವಚನಕಾರರ ಗುರುವಾದ ಅಲ್ಲಮನ ಪ್ರಯೋಗವನ್ನು ಗಮನಿಸಿ.

"ಕೊಟ್ಟ ಕುದುರೆಯನೇರಲಱಿಯದೆ...ನೆಱೆ<br>ಮೂರುಲೋಕವೆಲ್ಲವು ಹಲ್ಲಣವ ಹೊತ್ತು ಬಳಲುತ್ತೈದಾರೆ"

ಆಚಾರ್ಯ ತೀ.ನಂ.ಶ್ರೀ. ಮತ್ತು ಡಿ.ಎಲ್.ನ. ಅವರ ನೇತೃತ್ವದ ಸಂಪಾದಕ ಮಂಡಲಿಯಿಂದ ರಚಿತವಾದ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನಲ್ಲಿ ಮೇಲಿನ ರೂಪಗಳ ವಿಶ್ಲೇಷಣೆ ಮತ್ತು ಅರ್ಥವೃತ್ತಿಗಳು ಹೇಗೆ ಗೋಜಲಾಗಿವೆ ಮತ್ತು ತಪ್ಪುದಾರಿ ಹಿಡಿದಿವೆ ಎಂಬುದನ್ನು ಇಲ್ಲಿ ಮೊದಲು ಪರಿಶೀಲಿಸಿ ಅನಂತರ ಅದರ ಸಮರ್ಪಕ ವಿವರಣೆ ಏನಿರಬಹುದೆಂಬುದನ್ನು ವಿಚಾರಿಸಬಹುದು.

ಕನ್ನಡ-ಕನ್ನಡ ನಿಘಂಟಿನಲ್ಲಿ 'ಇರ್' ಧಾತುವಿನಿಂದ ರೂಪಗಳನ್ನು ಕೊಡುತ್ತಾ 'ಇದೆ'—ಪ್ರ.ಪು. ನ.ಲಿಂ. ಏ.ವ. ಕ್ರಿಯಾಪದ ಎಂದು ಸೂಚಿಸಿ ಅದರ ಪ್ರಯೋಗಗಳನ್ನು ಕೊಟ್ಟಿದ್ದಾರೆ. ಕಡೆಯಲ್ಲಿ ಇದಕ್ಕೆ ಸಂವಾದಿಯಾದ 'ಅದೆ' ಎಂಬುದನ್ನೂ ನೋಡಿ ಎಂದು ಸೂಚಿಸಲಾಗಿದೆ. 'ಅದೆ' ತೆಗೆದು ನೋಡಿದರೆ ಆ ಪದದ ನಿಷ್ಪತ್ತಿಯ ಬಗ್ಗೆ 'ಅದು + ಎ$_3$' ಎಂದು ವಿಶ್ಲೇಷಣೆ ಸಿಗುತ್ತದೆ. 'ಅದು' ಎಂಬುದರ ಅರ್ಥ 'that' ಅಲ್ಲವೆ ? ಅದಕ್ಕೆ 'ಎ' ಸೇರಿದಾಗ 'that is' ಅಥವಾ 'ಇದೆ' ಎಂಬ ಅರ್ಥ ಬರುತ್ತದೆಂಬುದು ಸಮಂಜಸವಲ್ಲ. ವಿದ್ವಾಂಸರು ಯಾವುದೋ ಅವಸರದಲ್ಲಿ ಇದನ್ನು ಹೀಗೆ ತೀರ್ಮಾನಿಸಿದ್ದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. 'ಅದು + ಎ' 'It is' ಎಂದು ಅರ್ಥವಾಗುವುದಾದರೆ 'ಇದು + ಎ' 'ಇದೆ' ಎಂದು ಏಕೆ ವಿಶ್ಲೇಷಿಸಬಾರದು ಎಂಬ ಪ್ರಶ್ನೆ ಏಳುವುದು ಸಹಜ. ಆದರೆ 'ಇದೆ'ಯನ್ನು 'ಇರ್'ನಿಂದ ನಿಷ್ಪನ್ನಗೊಳಿಸಿದ್ದಾರಲ್ಲ ? ಒಟ್ಟಿನಲ್ಲಿ ಇಲ್ಲಿನ ವಿಶ್ಲೇಷಣಕ್ರಮ ತೀರ ಅಸಮರ್ಪಕವಾಗಿದೆ ಎಂಬುದು ಯಾರಿಗಾದರೂ ಥಟ್ಟನೆ ಹೊಳೆಯುತ್ತದೆ. 'ಇದೆ'ಯನ್ನು ಮಾತ್ರ 'ಇರ್' ಧಾತುವಿನಿಂದ ನಿಷ್ಪನ್ನಗೊಳಿಸಿ ತತ್ಸಮಾನಾರ್ಥಕವಾದ 'ಅದೆ'ಯನ್ನು ಮಾತ್ರ ಸರ್ವನಾಮವಾದ 'ಅದು'ವಿನಿಂದ ನಿಷ್ಪನ್ನಗೊಳಿಸಿ 'ಅದು + ಎ' ಎನ್ನುವುದು ತೀರ ಅಸಂಗತ.

ಈಗ ಇದೆಲ್ಲದರ ಯುಕ್ತಿಸಮ್ಮತವಾದ ವಿಶ್ವಸನೀಯ ವಿವರಣೆ ಏನೆಂಬ ಕುತೂಹಲ ಮೂಡುತ್ತದೆ. ಹಿಂದೆ ಕೊಟ್ಟಿರುವ ಎರಡು ನಮೂನೆ ಪಟ್ಟಿಗಳ ಪರಿಶೀಲನೆಯಿಂದ ಸಿದ್ಧವಾಗುವ ಒಂದು ಮುಖ್ಯವಾದ ಅಂಶವೆಂದರೆ 'ಇರ್' ಧಾತುವಿಗೆ 'ಅಯ್' ಎಂಬ ಒಂದು ಬದ್ಧೋಪರೂಪಿಕೆ (bound allomorph) ಇದೆ ಎಂಬುದು. ಅದು ವಿಧ್ಯರ್ಥ, ನಿಷೇಧಾರ್ಥ, ಸಂಭಾವನಾರ್ಥ ಇತ್ಯಾದಿಗಳನ್ನುಳಿದು ಕೇವಲ ಸಾಮಾನ್ಯಾರ್ಥದಲ್ಲಿ ನಿಶ್ಚಿತ ವರ್ತಮಾನ ಕಾಲದಲ್ಲಿ (present perfect) ಮಾತ್ರ ಪ್ರಯೋಗವಾಗುತ್ತದೆ.

ಇದೊಂದು ಕ್ರಿಯಾಪದಕ್ಕೆ ಮಾತ್ರವೇ ಮೀಸಲಾಗಿದೆ ಎನ್ನಬಹುದಾದ ಮತ್ತೊಂದು ಅಂಶವೂ ಕುತೂಹಲಕಾರಿಯಾಗಿದೆ. ಇಲ್ಲಿ ಕ್ರಿಯಾಪದಗಳನ್ನು ವಿಶ್ಲೇಷಿಸಿದಾಗ ಬರುವ ಪುರುಷವಾಚಕ ಪ್ರತ್ಯಯಗಳನ್ನು ಗಮನಿಸಿ.

ಇದ್ದಾನೆ—ಇರ್ + ದ + ಅನೆ } ಇತ್ಯಾದಿ
ಇದ್ದಾಳೆ—ಇರ್ + ದ + ಅಳೆ }

ಇಲ್ಲಿ ಪುರುಷವಾಚಕ ಪ್ರತ್ಯಯಗಳು ಹಳಗನ್ನಡ, ನಡುಗನ್ನಡಗಳ ವ್ಯಾಕರಣ ವಿಧಿಗಳಲ್ಲಿ ಕಣ್ಣಿಗೇ ಬಿದ್ದಿಲ್ಲದ ಪ್ರತ್ಯಯಗಳೆಂಬುದೇ ಇಲ್ಲಿನ ವೈಶಿಷ್ಟ್ಯ. ಹಳಗನ್ನಡದಲ್ಲಿ ಪುರುಷವಾಚಕ ಪ್ರತ್ಯಯಗಳೆಂದರೆ ಕೇಶಿರಾಜನು ಹೇಳುವ ಸುಪ್ರಸಿದ್ಧವಾದ ಅಂ, ಅರ್, ಅಯ್, ಇರ್, ಎನ್, ಎವುಗಳು. ನಡುಗನ್ನಡದಲ್ಲಿ ಇವು ಸ್ವರಾಂತಗಳಾಗಿ ಮಾರ್ಪಟ್ಟುವು, ಅನಂತರ ಹೊಸಗನ್ನಡದ ಕಾಲಕ್ಕೆ ಪ್ರಥಮಪುರುಷದ ಪ್ರತ್ಯಯಗಳು ಆನೆ, ಆಳೆ, ಆರೆ. ಅದೆ, ಅವೆ ರೂಪಗಳನ್ನು ಪಡೆದುಕೊಂಡವೆಂದೂ ಅದು ಹೊಸಗನ್ನಡದ ಕಾಲಕ್ಕೆ ಆದ ಬದಲಾವಣೆ ಎಂದೂ ಒಂದು ಅಭಿಪ್ರಾಯವಿದೆ.* ಅದಕ್ಕೆ ಕಾರಣ ಬಂದಪನ್ > ಬಂದಹನು > ಬಂದಾನು ಎಂದಾಗಿ ಸಂದೇಹಾರ್ಥವನ್ನು ಸೂಚಿಸತೊಡಗಿದ್ದರಿಂದ ವರ್ತಮಾನನ್ಯೂನದಲ್ಲಿ ಪ್ರಯೋಗವಾಗುವ 'ಉತ್ತಾ' ಪ್ರತ್ಯಯದೊಡನೆ 'ಆನು' ಪ್ರತ್ಯಯಕ್ಕೆ ಅವಧಾರಣೆಯ 'ಎ'ತ್ವವನ್ನು ಸೇರಿಸಿಕೊಂಡಂತೆ ತೋರುತ್ತದೆಂದು ಊಹಿಸಲಾಗಿದೆ. ಆದರೆ ವಚನಗಳಿಂದ ಮತ್ತು ಕುಮಾರವ್ಯಾಸ ಭಾರತದಿಂದ ಉದ್ಧರಿಸಲ್ಪಟ್ಟ ಮೇಲಿನ ಉದಾಹರಣೆಗಳಿಂದ ಇದು ಹೊಸಗನ್ನಡ ಕಾಲಕ್ಕೆ ಆದ ಬದಲಾವಣೆ ಎಂಬುದು ಸರಿಯಲ್ಲ ಎಂದು ಸಿದ್ಧವಾಗುತ್ತದೆ. ಹಳಗನ್ನಡದಲ್ಲಿ ಬದಲಾವಣೆ ಹೊಂದಿದ ಪೂರ್ವದ ಹಳಗನ್ನಡದ ರೂಪಗಳು ನಡುಗನ್ನಡದಲ್ಲಿ ಮತ್ತೆ ತಲೆದೋರುವ ನಿದರ್ಶನಗಳಿವೆ. ಉದಾಹರಣೆಗೆ

| ಪೂ.ಹ.ಗ. | ಹ.ಗ. | ನ.ಗ. | |
|---|---|---|---|
| ಕೆಡು | ಕಿಡು | ಕೆಡು | |
| ಕೊಡು | ಕುಡು | ಕೊಡು | ಇತ್ಯಾದಿ |

ಇದೇ ರೀತಿ ಪೂ.ಹ.ಗ.ದಲ್ಲಿ ದೀರ್ಘಾದಿಯಾದ ಪುರುಷವಾಚಕ ಪ್ರತ್ಯಯಗಳಿಗೆ ಉದಾಹರಣೆಗಳು ಸಿಕ್ಕುತ್ತವೆ. 'ಸಂದಾನ್', 'ಬಂದಾನ್' ಇತ್ಯಾದಿ ರೂಪಗಳು ಪೂ.ಹ.ಗ.ದಲ್ಲಿ ಸಿಕ್ಕುತ್ತವೆ, ಅವೇ ರೂಪಗಳು ಮತ್ತೆ ನಡುಗನ್ನಡದಲ್ಲಿ ತಲೆದೋರಿರಬೇಕೆಂದು ಊಹಿಸಲು ಸಾಧ್ಯವಾಗುತ್ತದೆ. ಈಗ ವ್ಯಾಪಕವಾಗಿ ಬಳಕೆಯಲ್ಲಿ ಈ ದೀರ್ಘಾದಿ ಪ್ರತ್ಯಯಗಳು ವರ್ತಮಾನ ಕಾಲ ಪ್ರತ್ಯಯವಾದ 'ಉತ್ತ'ದ ಪರದಲ್ಲಿ ಸೇರುತ್ತವಷ್ಟೆ. ಆದರೆ ಇಲ್ಲಿ ಇದ್ದಾನೆ/ಇದಾನೆ, ಅಯ್ವಾನೆ, ಅಯ್ವಾರೆ ಇತ್ಯಾದಿ ರೂಪಗಳಲ್ಲಿ ಪುರುಷವಾಚಕಪ್ರತ್ಯಯಗಳು ವರ್ತಮಾನಕಾಲವಾಚಕ ಪ್ರತ್ಯಯದ ಪರದಲ್ಲಿ ಸೇರಿಲ್ಲ. ಅವು ಸೇರಿರುವುದು ಭೂತಕಾಲ ವಾಚಕ

* ಕನ್ನಡ ಕೈಪಿಡಿ ಪು. 380

ಪ್ರತ್ಯಯುವಾದ 'ದ'ಕಾರದ ಪರದಲ್ಲಿ. ಈ ವೈಲಕ್ಷಣ್ಯವು 'ಇರ್' ಧಾತುವಿಗೆ ಮಾತ್ರ ಸೀಮಿತವಾಗಿರುವಂತೆ ತೋರುವುದು ಇನ್ನೊಂದು ಕುತೂಹಲಕಾರಕವಾದ ಅಂಶ. ಇನ್ನಾವುದೇ ಧಾತುವಿಗೂ ಈ ಪ್ರಕ್ರಿಯೆ ಹಬ್ಬಿರುವಂತೆ ತೋರುವುದಿಲ್ಲ. 'ಇರ್' ಧಾತುವಿನೊಡನೆ ಭೂತಕಾಲ ವಾಚಕಪ್ರತ್ಯಯುವಾದ 'ದ'ದ ಪರದಲ್ಲಿ ವರ್ತಮಾನ ಕಾಲವಾಚಕ ಪ್ರತ್ಯಯುವಾದ 'ಉತ್ತ'ದ ಪರದಲ್ಲಿ ಸೇರುವ ಪುರುಷ-ವಾಚಕ ಪ್ರತ್ಯಯುಗಳು ಸೇರಿ ನಿಶ್ಚಿತಾರ್ಥದ ವರ್ತಮಾನಕಾಲವನ್ನು ಸೂಚಿಸುತ್ತವೆ. ಕಾಲವಾಚಕ ಪ್ರತ್ಯಯು ಭೂತಕಾಲದ್ದು. ಪುರುಷವಾಚಕ ಪ್ರತ್ಯಯುಗಳು ವರ್ತಮಾನ ಕಾಲದ ಪ್ರತ್ಯಯುದೊಡನೆ ಸೇರುವಂಥವು. ಪ್ರತೀತವಾಗುವ ಕಾಲ ವರ್ತಮಾನ. ವಚನಕಾರರಲ್ಲಿಯೂ ಮತ್ತು ಕುಮಾರವ್ಯಾಸನಲ್ಲಿಯೂ ಕಂಡುಬರುವ ಮೇಲಿನ ಪ್ರಯೋಗಗಳಲ್ಲಿ 'ತೊಳಲುತ್ತೈದಾರೆ', 'ತೋಱುತ್ತೈದನೆ', 'ಬರುತ್ತೈದಾರೆ' ರೂಪಗಳಲ್ಲಿ 'ಇರ್' ಧಾತುವಿನ ಕ್ರಿಯಾರೂಪಗಳು ತಪ್ಪದೆ ವರ್ತಮಾನ ನ್ಯೂನದ ಪರದಲ್ಲಿ ಮಾತ್ರವೇ ಪ್ರಯೋಗವಾಗಿವೆ ಎಂಬುದು ಇನ್ನೂ ಹೆಚ್ಚು ಗಮನಾರ್ಹವಾಗಿದೆ.

ಈ ವರೆಗಿನ ದ್ರಾವಿಡಭಾಷಾ ವಿಜ್ಞಾನಿಗಳ ಮತದಂತೆ ಕನ್ನಡದಲ್ಲಿರುವುದು ಭೂತ ಮತ್ತು ಅಭೂತ ಎಂಬ ಎರಡೇ ಕಾಲಗಳಷ್ಟೆ. ಮೂರನೆಯುದಾದ ವರ್ತಮಾನ ಕಾಲ ಕನ್ನಡದಲ್ಲಿಲ್ಲ; ಅದು ಸಂಸ್ಕೃತದ ವರ್ಚಸ್ಸಿನಿಂದ ವೈಯಾಕರಣರು ಭ್ರಾಂತಿಯಿಂದ ಮಾಡಿದ ವಿಶ್ಲೇಷಣೆಯು ಫಲ ಎಂಬುದು ಭಾಷಾವಿಜ್ಞಾನಿಗಳ ಸಿದ್ಧಾಂತವಷ್ಟೆ. ಇಲ್ಲಿ ಮೇಲಿನ ಕ್ರಿಯಾಪದಗಳನ್ನು ಗಮನಿಸಿದರೆ ಅವು ಈ ಎರಡು ಕಾಲಗಳಿಗಿಂತಲೂ ಭಿನ್ನವಾದ ನಿಶ್ಚಿತಾರ್ಥದ ವರ್ತಮಾನ ಕಾಲವನ್ನೇ ಸೂಚಿಸುತ್ತಿರುವುದನ್ನು ಕಾಣಬಹುದು. ಇದ್ದಾನೆ/ಇದಾನೆ, ಇದ್ದಾಳೆ/ಇದಾಳೆ, ಇದೆ—ಇವುಗಳಲ್ಲಿ ಭವಿಷ್ಯತ್ ಕಾಲದ ಸೂಚನೆ ಎಳ್ಳಷ್ಟೂ ಇಲ್ಲ. ಅದರ ಛಾಯೆ ಕೂಡ ಇವುಗಳಲ್ಲಿ ಕಾಣುವುದಿಲ್ಲ. ಆದ್ದರಿಂದ ಇವನ್ನು ಅಭೂತಾರ್ಥಕ ಎಂದು ಹೇಗೆ ಹೇಳಲು ಸಾಧ್ಯ? 'ಬರುತ್ತಾನೆ' ಎಂಬುದು ವರ್ತಮಾನ ಮತ್ತು ಭವಿಷ್ಯತ್ ಎರಡನ್ನೂ ಸೂಚಿಸಿ ಅಭೂತ ಕಾಲ ಎಂದು ವರ್ಣಿಸಲ್ಪಟ್ಟಂತೆ ಇಲ್ಲಿ ಇಲ್ಲವೇ ಇಲ್ಲ. 'ಬರುತ್ತಾನೆ' ಎಂದರೆ 'ಈ ದಿನ ಬರುತ್ತಾನೆ', 'ಈಗ ಬರುತ್ತಾನೆ' ಅಥವಾ 'ನಾಳೆ ಬರುತ್ತಾನೆ' ಹೀಗೆ ವರ್ತಮಾನ ಮತ್ತು ಭವಿಷ್ಯತ್ ಅಥವಾ ಒಟ್ಟಿನಲ್ಲಿ ಅಭೂತ ಎಂದು ಕರೆಯುವ ಕಾಲವನ್ನು ಸೂಚಿಸುತ್ತದೆ ಎಂದು ಭಾವಿಸಲು ಅವಕಾಶವುಂಟು. (ಇದನ್ನು ಕುರಿತ ಚರ್ಚೆ ಮುಂದೆ ಬರುತ್ತದೆ.) 'ಇದ್ದಾನೆ' 'ಇದ್ದಾಳೆ' 'ಇದೆ'ಗಳಲ್ಲಿ ಈ ಸಾಧ್ಯತೆಯೂ ಇಲ್ಲ. ಅವುಗಳಲ್ಲಿ ಸ್ಪಷ್ಟಾತಿಸ್ಪಷ್ಟವಾಗಿ ವರ್ತಮಾನಕಾಲವೇ ಸೂಚಿತವಾಗುತ್ತದೆ; ಭವಿಷ್ಯತ್ತಿನ ಸೂಚನೆ ಎಳ್ಳಷ್ಟೂ ಇಲ್ಲದಿರುವುದು ಇಲ್ಲಿ ಗಮನಿಸತಕ್ಕುದಾಗಿದೆ. 'ಇದ್ದಾನೆ' ಎಂದರೆ 'ಈಗ ಇದ್ದಾನೆ' ಎಂದರ್ಥವಾಗುವುದೇ ಹೊರತು 'ನಾಳೆ ಇದ್ದಾನೆ' ಎಂದಾಗುವಂತಿಲ್ಲವಷ್ಟೆ? ನಾಳೆಯು ಪ್ರಶ್ನೆ ಬಂದರೆ ಆಗ 'ಇದ್ದಾನೆ'ಯು

ಬದಲು 'ಇರುತ್ತಾನೆ' ಸೇರುತ್ತದೆ. ಇಲ್ಲಿ ಸ್ಪಷ್ಟವಾಗುವ ಮಹತ್ವಪೂರ್ಣವಾದ ಅಂಶವೆಂದರೆ ಕನ್ನಡದಲ್ಲಿ ಇರುವುದು ಎರಡೇ ಕಾಲಗಳು ಎಂಬ ಆಧುನಿಕ ದ್ರಾವಿಡ ಭಾಷಾ ಶಾಸ್ತ್ರಜ್ಞರ ಸಿದ್ಧಾಂತ ಈ ಕಾರಣದಿಂದ ಬುಡಮೇಲಾಗುತ್ತದೆ ಎಂಬುದು.

ಇನ್ನು ಮುಖ್ಯ ವಿಚಾರಕ್ಕೆ ಬಂದರೆ 'ಇದ್ದಾನೆ' ಇತ್ಯಾದಿ ರೂಪಗಳ ವಿಶ್ಲೇಷಣೆ. ಇರ್ + ದ + ಆನೆ ಇತ್ಯಾದಿ ಎಂದೇನೋ ವಿವರಿಸಬಹುದು. ಇವುಗಳಿಗೆ ಪುಲ್ಲಿಂಗ, ಸ್ತ್ರೀಲಿಂಗಗಳಲ್ಲಿ ದ್ವಿತ್ವ ದಕಾರ ಸಹಿತ ರೂಪಗಳು ಪರ್ಯಾಯವಾಗಿರುವುದು ಈ ವಿಶ್ಲೇಷಣೆಗೆ ಪೂರಕವಾಗಿದೆಯೇ ಹೊರತು ವಿರೋಧವಾಗಿಲ್ಲ. ಆದರೆ ದ್ವಿತ್ವರಹಿತ ದಕಾರವನ್ನುಳ್ಳ 'ಇದೆ'ಯ ವಿಶ್ಲೇಷಣೆ ಹೇಗೆ? ಅದನ್ನು ಇರ್ + ದ + ಅದೆ ಎಂದು ವಿಶ್ಲೇಷಿಸಬೇಕಾಗುತ್ತದೆ. ಆಗ ಇರ್ದದೆ > ಇದ್ದದೆ > ಇದದೆ ಎಂಬ ರೂಪ ಬರುತ್ತದೆ. ಇಲ್ಲಿ ಮಧ್ಯದ 'ಇದ್ದದೆ' ಎಂಬ ರೂಪವೂ ಕೆಲವರ ಬಾಯಲ್ಲಿ ಕೇಳಿಬರುವುದುಂಟು. ಸೌಲಭ್ಯಾಕಾಂಕ್ಷೆಯ ಕಾರಣದಿಂದ ತ್ವರಿತೋಚ್ಚಾರಣೆಯಲ್ಲಿ ಒಂದು ಅಕ್ಷರ ಲೋಪವಾಗುವ ಈ ಕ್ರಮವನ್ನು ಇತರ ಕಡೆಗಳಲ್ಲೂ ಕಾಣಬಹುದು. ಉದಾಹರಣೆಗೆ ಆದದ್ದರಿಂದ > ಆ(ದ)ದ್ದರಿಂದ, ಬಂದ್(ಅದ್)ಆನೆ > ಬಂದಾನೆ. ಬಂದಾನೆಯಲ್ಲಿ 'ಇರ್' ಧಾತುವೇ ಲೋಪವಾಗುವುದು ಕಂಡುಬರುತ್ತದೆ. ಆದರೆ ಅದರ ಅರ್ಥ ಪ್ರತೀತಿಗೆ ಚ್ಯುತಿಯೊದಗಿಲ್ಲದಿರುವುದು ಗಮನಾರ್ಹ. ಇಂತಹ ಕಡೆಗಳಲ್ಲಿ ಬಂದ್ + (ಅದ್) + ಆನೆ ಎಂಬ ಅದರ ವಿಶ್ಲೇಷಣೆಯನ್ನು ಗುರುತಿಸಿ 'ಇರ್' ಧಾತು ಈ ಪರಿಸರದಲ್ಲಿ ಶೂನ್ಯೋಪರೂಪಿಕೆ (zero allomorph) ಯನ್ನು ಹೊಂದಿದೆ ಎಂದು ವಿವರಿಸಲಾಗುತ್ತದೆ. ಈ ಪ್ರಕ್ರಿಯೆ ಇತರ ಕ್ರಿಯಾರೂಪಗಳಲ್ಲೂ ಕಂಡು-ಬರುತ್ತದೆ.

ಉದಾ : ಹೋಗಿ + $\phi$ + ಆನೆ → ಹೋಗ್ಯಾನೆ

ಕೇಳಿ + $\phi$ + ಆನೆ → ಕೇಳ್ಯಾನೆ

ಹಚ್ಚಿ + $\phi$ + ಆರೆ → ಹಚ್ಯಾರೆ

ಮಾರಿ + $\phi$ + ಆರೆ → ಮಾರ್‍ಯಾರೆ

ಒಕ್ಕಲಗೇರ್‍ಯಾಗೆ ಮಳೆರಾಯ — ಅವರು

ಮಕ್ಕಳ ಮಾರ್‍ಯಾರೊ ಮಳೆರಾಯ

ಇತ್ಯಾದಿ

ಇನ್ನು ಕೆಲವು ಕಡೆ ಉಳಿದಿರುವ ಅದರ ಅಸ್ತಿತ್ವವು ಸ್ಪಷ್ಟವಾಗಿ ಕಂಡುಬರುತ್ತದೆ.

ಉದಾ : ತುಳಿದು + (ಅ)ದ್ + ಆನೆ → ತುಳುದ್ದಾನೆ

ಕುಣಿದು + (ಅ)ದ್ + ಆಳೆ → ಕುಣುದ್ದಾಳೆ

ಅಯ್ದೇನೆ/ಅದೇನೆ ಇತ್ಯಾದಿ ರೂಪಗಳನ್ನು ಅಯ್+ದ+ಏನೆ ಎಂದು ವಿಶ್ಲೇಷಿಸಬಹುದು. 'ಅಯ್'ನ 'ಯ್'ಕಾರವು ಲೋಪವಾದ ನಂತರ ಉಳಿಯುವ 'ಅದೇನೆ' ಇತ್ಯಾದಿ ರೂಪಗಳನ್ನು ಅ+ದ+ಏನೆ ಎಂದು ಬಿಡಿಸಬೇಕಾಗುತ್ತದೆ. ಆಗ 'ಅ—'ಕಾರವು 'ಇರ್' ಧಾತುವಿನ ಪ್ರಾತಿಪದಿಕವೆಂದು ಪರಿಗಣಿಸಲ್ಪಡುವುದಾಗುತ್ತದೆ. ಆದರೆ ಪ್ರಥಮ ಪುರುಷ ನಪುಂಸಕ ಲಿಂಗದ ರೂಪಗಳಾದ 'ಅದೆ', 'ಅವೆ'ಗಳಲ್ಲಿ ವಿಭಜನೆ ಅಷ್ಟು ಸರಳವಾಗಿಲ್ಲ. ಅಲ್ಲಿಯೂ ಸಹ 'ಇದೆ', 'ಇವೆ' ರೂಪಗಳಿಗೆ ಅನ್ವಯವಾಗುವ ನಿಯಮವೇ ಅನ್ವಯಿಸಲ್ಪಟ್ಟು ಈ ಕೆಳಗಿನಂತೆ ಕ್ರಿಯಾರೂಪಗಳು ಸಿದ್ಧವಾಗುತ್ತವೆ.

ಅಯ್+ದ್+ಅತೆ → ಅಯ್(ದ)ತೆ—ಅಯ್ತೆ
ಅಯ್+ದ್+ಅತಿ → ಅಯ್(ದ)ತಿ—ಅಯ್ತಿ
ಅ+ದ್+ಅದೆ → ಅ(ದ)ದೆ—ಅದೆ
ಅ+ದ್+ಅವೆ → ಅ(ದ)ವೆ—ಅವೆ

ಇಲ್ಲಿ 'ಅತೆ' ಮತ್ತು 'ಅತಿ'ಗಳು ನಪುಂಸಕಲಿಂಗ ಏಕವಚನದ ಪುರುಷವಾಚಕ ಪ್ರತ್ಯಯವಾದ 'ಅದೆ' ಎಂಬುದರ ವಿಕಲ್ಪರೂಪಗಳೆಂಬುದು ಸ್ಪಷ್ಟ.

ಅ+ದ+ಅದೆ → ಅ(ದ)ದೆ—ಅದೆಯನ್ನು ಗಮನಿಸಿ ಇಲ್ಲಿ ಸಿದ್ಧರೂಪವಾದ 'ಅದೆ'ಯಲ್ಲಿ 'ಅ—'ವನ್ನು 'ಇರ್' ಧಾತುವಿನ ಬದ್ಧೋಪರೂಪಿಕೆ ಎನ್ನಬಹುದು. ಇದಕ್ಕೆ ಸೇರಿರುವ ಭೂತಕಾಲವಾಚಕ ಪ್ರತ್ಯಯವು ಸಿದ್ಧರೂಪದಲ್ಲಿ ಲೋಪವಾಗಿದೆ. ಪುರುಷವಾಚಕ ಪ್ರತ್ಯಯದ ಆದಿಸ್ವರವೂ ಅದರೊಡನೆ ಲೋಪವಾಗಿ ಅ+(ದ+ಅ)ದೆ → ಅದೆ ಆಗಿದೆಯೇ ಹೊರತು ಕನ್ನಡ-ಕನ್ನಡ ನಿಘಂಟು ಸಮಿತಿಯವರು ವಿಶ್ಲೇಷಿಸಿರುವಂತೆ ಸರ್ವನಾಮವಾದ 'ಅದು+ಎ$_3$' ಆಗಿ 'ಅದೆ' ಕ್ರಿಯಾಪದ ಸಿದ್ಧಿಸಿಲ್ಲ. ಆದ್ದರಿಂದ ಅವರ ವಿಶ್ಲೇಷಣೆ ಸಮರ್ಪಕವಾಗಿಲ್ಲ.

'ಇರ್' ಧಾತುವಿನ ವಿಚಿತ್ರ ವೇಷಾಂತರಗಳು ಇಷ್ಟಕ್ಕೂ ಮುಗಿಯುವುದಿಲ್ಲ. ಉದಾಹರಣೆಗೆ ಬೆಂಗಳೂರು ಮೈಸೂರು ಜಿಲ್ಲೆಗಳಲ್ಲಿ ಕಂಡುಬರುವ ಗ್ರಾಮ್ಯ ಪ್ರಯೋಗಗಳನ್ನು ಗಮನಿಸಿ. 'ಅವ್ನೆ', 'ಅವ್ಳೆ', 'ಅವ್ರೆ'—ಇವು ಕೂಡ 'ಇರ್' ಧಾತುವಿನಿಂದ ಸಿದ್ಧವಾದ ರೂಪಗಳೇ ಎಂಬುದು ಸ್ಪಷ್ಟ. ಇವುಗಳ ವಿಶ್ಲೇಷಣೆ ಹೇಗೆ? ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಮಾತ್ರ ಕಂಡುಬರುವ ವಕಾರಾಗಮವು ಕುತೂಹಲಕಾರಿಯಾಗಿದೆ. ನಪುಂಸಕಲಿಂಗದಲ್ಲಿ ಈ ವಕಾರಾಗಮವಿಲ್ಲ. ಹಿಂದೆ ಹೇಳಿದ 'ಅಯ್ತೆ', 'ಅಯ್ತಿ', 'ಅದೆ', 'ಅವೆ' ರೂಪಗಳನ್ನೇ ನಪುಂಸಕಲಿಂಗದಲ್ಲಿ ಈ ಪ್ರದೇಶದಲ್ಲಿ ಬಳಸಲಾಗುತ್ತದೆ. ಆದರೆ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಮಾತ್ರ ಏಕವಚನ ಮತ್ತು ಬಹುವಚನಗಳೆರಡರಲ್ಲೂ 'ವ'ಕಾರಾಗಮ ಕಂಡುಬರುತ್ತದೆ. ಇದಕ್ಕೆ ಕಾರಣವನ್ನು ಈ ಕೆಳಗಿನ ವಿಶ್ಲೇಷಣೆಯಿಂದ ತಿಳಿಯಬಹುದು.

ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳಲ್ಲಿ 'ಅದಾನೆ', 'ಅದಾಳೆ', 'ಅದಾರೆ' ರೂಪಗಳಲ್ಲಿ ಪುರುಷವಾಚಕ ಪ್ರತ್ಯಯವು ಆದಿದೀರ್ಘವಾಗಿರುವುದರಿಂದ ಕಾಲವಾಚಕ ಪ್ರತ್ಯಯವಾದ 'ದ'ಕಾರವು ಲೋಪವಾಗದೆ ಉಳಿದಿದೆ. ಆದೇ ನಪುಂಸಕಲಿಂಗದಲ್ಲಿ ಪುರುಷವಾಚಕ ಪ್ರತ್ಯಯವು ಹ್ರಸ್ವಾದಿಯಾಗಿರುವುದರಿಂದ ಈ ಹಿಂದೆ ವಿವರಿಸಿದಂತೆ ಮಧ್ಯಾಕ್ಷರವಾದ 'ದ'ಕಾರವು ಲೋಪವಾಗಿ 'ಅದೆ' ರೂಪ ಸಿದ್ಧವಾಗುತ್ತದೆ. ಆದರೆ ಕೆಲವು ಪ್ರದೇಶಗಳಲ್ಲಿ (ಮೈಸೂರು–ಬೆಂಗಳೂರು) ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳಲ್ಲೂ ಪುರುಷವಾಚಕ ಪ್ರತ್ಯಯದ ಹ್ರಸ್ವಾದಿ ರೂಪಗಳನ್ನೇ ಬಳಸಲಾಗುತ್ತದೆ. ಆಗ ಈ ರೂಪಗಳಲ್ಲೂ ಕಾಲವಾಚಕ ಪ್ರತ್ಯಯವಾದ 'ದ'ಕಾರವು ಲೋಪವಾಗಿ ಅದರ ಶೂನ್ಯೋಪರೂಪಿಕೆಯು ಸೇರುತ್ತದೆ. ಆಗ ಈ ಕೆಳಗಿನಂತೆ ರೂಪಗಳು ಸಿದ್ಧಿಸುತ್ತವೆ.

ಅ + (ದ್) + ಅನೆ—ಅ + $\phi$ + ಅನೆ→ಅವ್ನೆ
ಅ + (ದ್) + ಅಳೆ—ಅ + $\phi$—ಅಳೆ→ಅವ್ಳೆ
ಅ + (ದ್) + ಅರೆ—ಅ + $\phi$—ಅರೆ→ಅವ್ರೆ

ಇಲ್ಲಿ ಎರಡು ಅಕಾರಗಳು ಒಂದಕ್ಕೊಂದು ಪರವಾಗುವುದರಿಂದ ಸಂಧಿ ನಿಯಮದಂತೆ ಮಧ್ಯೆ 'ವ'ಕಾರಾಗಮವಾಗಿದೆ. ಇವು ಗ್ರಾಮ್ಯರೂಪಗಳಾದರೂ ವ್ಯಾಕರಣ ನಿಯಮಗಳಿಗೆ ವಿರುದ್ಧವಲ್ಲ. ವ್ಯಾಕರಣದ ಹೆಸರನ್ನೇ ಕೇಳಿ ಅರಿಯದ ಗ್ರಾಮ್ಯರ ಬಾಯಲ್ಲಿ ಸ್ವಯಂ ಸಿದ್ಧವಾಗಿ ಪಾಲಿಸಲ್ಪಡುವ ಈ ನಿಯಮಗಳು ಭಾಷಾ ಶಾಸ್ತ್ರದ ನಿಯಮಗಳ ನಿಖರತೆಗೂ ಅಪವಾದರಹಿತತೆಗೂ ಸಾಕ್ಷಿಯಾಗಿರುವುದನ್ನು ಕಂಡು ಭಾಷಾ ವಿಜ್ಞಾನಿಯು ದಂಗುಬಡಿದು ನಿಲ್ಲುತ್ತಾನೆ. "Linguistic rules have no exceptions" ಎಂಬ ಮಾತು ಸತ್ಯ.

ಈ ವರೆಗಿನ ಪರಾಮರ್ಶೆಯ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಇರುವ ಕಾಲಗಳು ಎರಡೇ ಅಥವಾ ಮೂರೇ ಎಂಬ ಬಗ್ಗೆ ಭಾಷಾ ಶಾಸ್ತ್ರಜ್ಞರ ಅಭಿಪ್ರಾಯಗಳನ್ನು ಇಲ್ಲಿ ಇನ್ನಷ್ಟು ಕೂಲಂಕಷವಾಗಿ ಪರಿಶೀಲಿಸಬಹುದು. ಕನ್ನಡದಲ್ಲಿ ವರ್ತಮಾನ ಕಾಲವೇ ಇಲ್ಲ; ಇರುವುದು ಎರಡೇ ಕಾಲಗಳು—ಭೂತ ಮತ್ತು ಅಭೂತ— ಎಂಬ ಈ ವರೆಗಿನ ಭಾಷಾ ಶಾಸ್ತ್ರಜ್ಞರ ಸಿದ್ಧಾಂತವು ಮೇಲಿನ ವಿವರಣೆಯಿಂದ ಪ್ರಶ್ನಾರ್ಹವಾಗುತ್ತದೆ. ಭೂತ, ವರ್ತಮಾನ, ಭವಿಷ್ಯತ್— ಮೂರು ಕಾಲಗಳೂ ಕನ್ನಡದಲ್ಲಿವೆ ಎಂಬ ವಾದ ಎಷ್ಟುಮಟ್ಟಿಗೆ ಸಮರ್ಪಕವಾಗಿದೆ ಎಂಬುದನ್ನು ಈಗ ಪರಿಶೀಲಿಸಬಹುದು.

ಎರಡೇ ಕಾಲಗಳಿವೆ ಎಂಬ ಅಭಿಪ್ರಾಯವು ಎರಡು ಅಂಶಗಳನ್ನು ಆಧರಿಸಿರುವುದು ಕಂಡುಬರುತ್ತದೆ. 1) ಕ್ರಿಯಾಪದವು ಸೂಚಿಸುವ ರೂಢಿಗತ ಕಾಲಪ್ರತೀತಿ 2) ಕ್ರಿಯಾಪದದಲ್ಲಿ ಅಂತರ್ಗತವಾಗಿರುವ ಪ್ರತ್ಯಯ.

ಈಗ ಮೊದಲನೆಯ ಅಂಶವನ್ನು ಕೂಲಂಕಷವಾಗಿ ಚರ್ಚಿಸಿದಾಗ ಎರಡು ಕಾಲಗಳ ಸಿದ್ಧಾಂತದ ಅತಾರ್ಕಿಕತೆ ಮನದಟ್ಟಾಗುವುದನ್ನು ಕಾಣಬಹುದು. ಉದಾಹರಣೆಗೆ 'ಬರುತ್ತಾನೆ' ಎಂಬ ಕ್ರಿಯಾಪದವು ಅಭೂತಾರ್ಥಕವಾಗಿದೆ ಎಂದು ಹೇಳಲಾಗುತ್ತದೆಯಷ್ಟೆ. 'ಬರುತ್ತಾನೆ' ಎಂದರೆ ಈ ದಿನ ಬರುತ್ತಾನೆ ಎಂದಾಗಬಹುದು. ಅಥವಾ ನಾಳೆ ಬರುತ್ತಾನೆ ಎಂದೂ ಆಗಬಹುದು. ಆ ಕಾರಣದಿಂದ ಇದು ಅಭೂತಾರ್ಥಕ ಎಂದು ವಾದಿಸಲಾಗುತ್ತದೆ. ಆದರೆ ನಿಷ್ಕೃಷ್ಟವಾಗಿ ಪರ್ಯಾಲೋಚಿಸಿದಾಗ 'ಬರುತ್ತಾನೆ' ಅಭೂತಾರ್ಥಕವಲ್ಲ; ಅದು ಭವಿಷ್ಯಾರ್ಥಕ ಎಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ 'ಈ ದಿನ ಬರುತ್ತಾನೆ' ಎಂದಾಗಲೂ ಅದು ಸೂಚಿಸುವುದು ಈಗ ನಡೆಯುತ್ತಿರುವ ಕ್ರಿಯೆಯನ್ನಲ್ಲ; ಈ ದಿನವೇ ಆದರೂ ಇನ್ನು ಮುಂದೆ ನಡೆಯಲಿರುವ ಕ್ರಿಯೆಯನ್ನು ಎಂಬುದು ಸ್ಪಷ್ಟವಾಗುತ್ತದೆ. ವರ್ತಮಾನ ಎಂದರೆ ಈ ದಿನ ನಡೆಯುವುದು ಎಂದರ್ಥವಲ್ಲ; ಈಗ ನಡೆಯುತ್ತಾ ಇರುವುದು ಎಂದರ್ಥ. ಈಗ ನಡೆಯುತ್ತಿರುವ ಕ್ರಿಯೆಯನ್ನು ಸೂಚಿಸುವಾಗ 'ಬರುತ್ತಿದ್ದಾನೆ' (ಬರುತ್ತಾ + ಇದ್ದಾನೆ) ಎಂಬ ಪ್ರಯೋಗವನ್ನು ಕಾಣುತ್ತೇವೆ. ನಿಷ್ಕೃಷ್ಟಪರಿಶೀಲನೆಯಲ್ಲಿ 'ಬರುತ್ತಿದ್ದಾನೆ' ಎಂಬುದು ವರ್ತಮಾನ ಕಾಲವನ್ನೂ 'ಬರುತ್ತಾನೆ' ಎಂಬುದು ಭವಿಷ್ಯತ್ ಕಾಲವನ್ನೂ ಸೂಚಿಸುತ್ತವೆಂಬುದು ತಿಳಿದು ಬರುತ್ತದೆ. ಅಲ್ಲದೆ ವ್ಯವಹಾರದಲ್ಲಿ ಮತ್ತೊಂದು ರೀತಿಯಲ್ಲೂ ಭವಿಷ್ಯತ್ ಕಾಲವು ವಿವಕ್ಷೆಯಾಗುವುದನ್ನು ಕಾಣುತ್ತೇವೆ. 'ಬರಬಹುದು' ಎಂಬುದರಲ್ಲಿರುವ 'ಬಹುದು' ಸಹಾಯಕ ಕ್ರಿಯಾಪದವು ಹೊಸಗನ್ನಡದಲ್ಲಿ ಭವಿಷ್ಯತ್ ಕಾಲಸೂಚನೆಗಾಗಿಯೇ ಮೀಸಲಾಗಿರುವಂತಿದೆ. ಅಲ್ಲದೆ 'ಬರುತ್ತಿದ್ದಾನೆ' ಮತ್ತು 'ಬರಬಹುದು' ಎಂಬ ಎರಡು ಕಡೆಗಳಲ್ಲೂ ಕಾಲವಿವಕ್ಷೆಯು ಪ್ರಧಾನವಾಗಿ ಸಹಾಯಕ ಕ್ರಿಯಾಪದಗಳಿಂದಲೇ ಆಗುವುದು ಮತ್ತೊಂದು ಗಮನಾರ್ಹವಾದ ಅಂಶ.

ಕೆಲವೊಮ್ಮೆ ವಕ್ತೃವು ಮೂರು ಕಾಲಗಳನ್ನೂ ನಿಷ್ಕೃಷ್ಟವಾಗಿ ತಿಳಿಸಲೇಬೇಕೆಂಬ ಉದ್ದೇಶವನ್ನು ಹೊಂದಿರುವ ಸಂದರ್ಭಗಳೂ ಇರುತ್ತವೆ. ಅಂತಹ ಸಂದರ್ಭಗಳಲ್ಲಿ ಪ್ರಯೋಗವಾಗುವ ಕ್ರಿಯಾರೂಪಗಳನ್ನು ಗಮನಿಸಿ.

ಉದಾಹರಣೆಗೆ ಒಂದು ಸ್ಥಳದಲ್ಲಿ ಒಬ್ಬನು ವಾಸವಾಗಿರುವ ಬಗ್ಗೆ ಸಂದೇಹ ನಿವಾರಣೆಗೆ ಸವಾಲು ನಡೆಯುತ್ತದೆಂದಿಟ್ಟುಕೊಳ್ಳೋಣ. ಅದನ್ನು ಖಚಿತಪಡಿಸಲು ಮತ್ತೊಬ್ಬನು ಹೀಗೆ ಹೇಳುವುದುಂಟು.

ಅವನು ಅಲ್ಲಿ (ಹಿಂದೆ) ಇದ್ದ
(ಈಗ) ಇದ್ದಾನೆ
(ಮುಂದೆ) ಇರುತ್ತಾನೆ/ಇರಬಹುದು

ಅದೇ ರೀತಿ

(ನಿನ್ನೆ) ಬಂದ
(ಈಗ) ಬರುತ್ತಾ ಇದ್ದಾನೆ
(ನಾಳೆ) ಬರುತ್ತಾನೆ/ಬರಬಹುದು

ಮೇಲಿನ ಪ್ರಯೋಗಗಳಿಂದಲೂ 'ಬರುತ್ತಾನೆ' ಇತ್ಯಾದಿ ರೂಪಗಳು ಅಭೂತಾರ್ಥಕವಲ್ಲ. ಅವು ಖಚಿತವಾಗಿ ಸೂಚಿಸುವುದು ಭವಿಷ್ಯತ್‌ಕಾಲವನ್ನೇ ಎಂಬುದು ತಿಳಿಯುತ್ತದೆ.

ಈಗ ಎರಡನೆಯ ಅಂಶವಾದ ಪ್ರತ್ಯಯಗಳ ದೃಷ್ಟಿಯಿಂದ ಕಾಲವಿವಕ್ಷೆಯನ್ನು ಪರಾಮರ್ಶಿಸಬಹುದು. ಹೊಸಗನ್ನಡದಲ್ಲಿ ವರ್ತಮಾನ ಮತ್ತು ಭವಿಷ್ಯತ್ ಕಾಲಗಳೆರಡೂ ಸಹಾಯಕ ಕ್ರಿಯಾಪದಗಳ ಸೇರುವಿಕೆಯಿಂದ ಸೂಚಿತವಾಗುತ್ತವೆಂಬುವನ್ನು ಮೇಲೆ ಹೇಳಲಾಗಿದೆ. ಇವುಗಳಲ್ಲಿ 'ಇರು' ಧಾತುವಿನ ರೂಪಗಳು ಸಹಾಯಕ ಕ್ರಿಯಾಪದವಾಗಿಯೂ ಮುಖ್ಯ ಅಥವಾ ಸ್ವತಂತ್ರ ಕ್ರಿಯಾಪದವಾಗಿಯೂ ಪ್ರಯೋಗವಾದರೆ 'ಬರು' ಧಾತುವಿನ ರೂಪವಾದ 'ಬಹುದು' ಸಹಾಯಕ ಕ್ರಿಯಾಪದವಾಗಿ ಮಾತ್ರ ಪ್ರಯೋಗವಾಗುತ್ತದೆ. ಇವುಗಳ ನಿಷ್ಪತ್ತಿಯನ್ನು ಗಮನಿಸಿದಾಗಲೂ ಕಾಲವಾಚಕ ಪ್ರತ್ಯಯಗಳೂ ಮತ್ತು ಅವು ಸೂಚಿಸುವ ಕಾಲಗಳೂ ಕುತೂಹಲಕಾರಿಯಾಗಿರುವುದನ್ನು ಕಾಣಬಹುದು. 'ಬಹುದು' ಕ್ರಿಯಾರೂಪವು ಭವಿಷ್ಯತ್‌ಕಾಲಸೂಚಕವಾಗಿದ್ದು ಅದರ ಪ್ರತ್ಯಯಕ್ಕೂ ಅದು ಸೂಚಿಸುವ ಕಾಲಕ್ಕೂ ತಾಳೆಯಿದೆ.

ಬರ್ + ಪ + ಉದು → ಬರ್ಪುದು > ಬಹುದು ಇದು ತೀರ ಸರಳವಾಗಿಯೇ ಇದೆ. ಆದರೆ ವರ್ತಮಾನ ಕಾಲಸೂಚಕ ಕ್ರಿಯಾಪದದ ವಿಭಜನೆ ಇಷ್ಟು ಸರಳವಾಗಿಲ್ಲ.

ಇರ್ + ದ + ಆನೆ —ಇದ್ದಾನೆ
+ ಆಳೆ —ಇದ್ದಾಳೆ
+ (ಅ)ದೆ—ಇದೆ

ಇಲ್ಲಿ 'ದ'ಕಾರವು ಭೂತಕಾಲವಾಚಕ ಪ್ರತ್ಯಯ ಎಂಬುದು ಗಮನಾರ್ಹ. ಅದರೊಡನೆ ಸೇರುವ ಪುರುಷವಾಚಕ ಪ್ರತ್ಯಯಗಳು ಏ.ಕಾ.ಕ್ಕೆ ಮೀಸಲಾಗಿರುವಂಥವು. ಏಕೆಂದರೆ 'ಅನು', 'ಅಳು' ಇತ್ಯಾದಿ ರೂಪಗಳು ಭವಿಷ್ಯತ್ ಕಾಲವಾಚಕ ಪ್ರತ್ಯಯವಾದ 'ವ'ದ ಪರದಲ್ಲಿ ಸೇರುತ್ತವೆ. ಅವಧಾರಣೆಯ 'ಎ'ತ್ವ ಸಹಿತ ರೂಪಗಳಾದ 'ಆನೆ', 'ಅನೆ' ಇತ್ಯಾದಿ ರೂಪಗಳು ವರ್ತಮಾನ ಕಾಲಪ್ರತ್ಯಯವಾದ 'ಉತ್ತ'ದ ಪರದಲ್ಲಿ ಸೇರುತ್ತವೆ. ಆದರೆ ಭವಿಷ್ಯತ್ ಕಾಲವಾಚಕ ಪ್ರತ್ಯಯವಾದ

'ವ'ಕಾರವೂ ಅದರಿಂದ ಕೂಡಿದ 'ಬರುವನು' ಇತ್ಯಾದಿ ರೂಪಗಳೂ ರೂಢಿಯಿಂದ ಮಾಯವಾಗಿ ಅವುಗಳ ಸ್ಥಾನವನ್ನು 'ಬಹುದು' ಕ್ರಿಯಾಪದವೂ ಮತ್ತು ವರ್ತಮಾನ ಕಾಲದ ಪ್ರತ್ಯಯವಾದ 'ಉತ್ತ+ಅನೆ' ಸಹಿತರೂಪಗಳೂ ಆಕ್ರಮಿಸಿದುವು. ಇದ ರಿಂದಾಗಿ ಖಚಿತವಾದ ವರ್ತಮಾನ ಕಾಲದ ಸೂಚನೆಗೆ ನಡುಗನ್ನಡದ ಕಾಲದಿಂದಲೂ ರೂಢಿಗೆ ಬಂದಿದ್ದ 'ಇರು' ಧಾತುವಿನ ನಿಷ್ಪನ್ನ ರೂಪಗಳಾದ 'ಇದ್ದಾನೆ' ಇತ್ಯಾದಿಗಳು ಪ್ರಯೋಗವಾಗತೊಡಗಿದುವು. ಅಷ್ಟೇ ಹೊರತು 'ಅನೆ'. 'ಅನೆ' ಇತ್ಯಾದಿ ರೂಪಗಳು ವರ್ತಮಾನ ಕಾಲಪ್ರತ್ಯಯದ ಪರದಲ್ಲಿ ಸೇರುವ ಪ್ರತ್ಯಯಗಳೇ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ—ಕ್ರಮೇಣ ಅವುಗಳ ಕಾಲಪ್ರತೀತಿಯಲ್ಲಿ ಸಂದಿಗ್ಧತೆ ತಲೆದೋರಿದರೂ.

ಆದ್ದರಿಂದ 'ಇದ್ದಾನೆ' ಕ್ರಿಯಾಪದದಲ್ಲಿ ಕಾಲವಾಚಕ ಪ್ರತ್ಯಯವು ಭೂತಕಾಲ ದ್ದಾಗಿದ್ದು ಪುರುಷವಾಚಕ ಪ್ರತ್ಯಯವು ಮಾತ್ರ ವರ್ತಮಾನಕಾಲದ್ದೆಂಬುದು ಸ್ಪಷ್ಟ ವಾಗುತ್ತದೆ. ಈ ಕ್ರಮವು ಒಂದು ರೀತಿಯಲ್ಲಿ ಹಳಗನ್ನಡದ 'ದಪ' ಪ್ರತ್ಯಯದ ಸ್ವರೂಪಕ್ಕೆ ಸದೃಶವಾಗಿದೆ. ಹಳಗನ್ನಡ ವೈಯಾಕರಣರು ವರ್ತಮಾನಕಾಲಪ್ರತ್ಯಯ ಎಂದು ಪರಿಗಣಿಸುವ 'ದಪ'ವನ್ನು ವಿಭಜಿಸಿದಾಗ ದ–ಪ ಎಂದು ಎರಡು ಭಾಗವಾಗು ತ್ತದೆ. ಇದರಲ್ಲಿ 'ದ'ಕಾರವು ಭೂತಕಾಲವನ್ನೂ 'ಪ'ಕಾರವು ಭವಿಷ್ಯತ್‌ಕಾಲವನ್ನೂ ಸೂಚಿಸುವ ಪ್ರತ್ಯಯಗಳೆಂಬುದು ಸ್ಪಷ್ಟ (ಪ>ವ). ಇವೆರಡೂ ಸೇರಿ ವರ್ತಮಾನ ಕಾಲವನ್ನು ಸೂಚಿಸುತ್ತವೆಂಬುದು ಹಳಗನ್ನಡ ವೈಯ್ಯಾಕರಣರ ಮತ. 'ಇದ್ದಾನೆ' ಇತ್ಯಾದಿ ರೂಪಗಳಲ್ಲೂ ಹೀಗೇ ಆಗಿದ್ದು ಭೂತಕಾಲವಾಚಕ ಪ್ರತ್ಯಯದೊಡನೆ ವರ್ತಮಾನ ಕಾಲದ ಪುರುಷವಾಚಕ ಪ್ರತ್ಯಯಗಳು ಸೇರಿ ಆದ ಒಂದು ರೀತಿಯ ಮಿಶ್ರರೂಪದ ಕ್ರಿಯಾಪದವು ಸಿದ್ಧವಾಗಿ ವರ್ತಮಾನಕಾಲವನ್ನು ಸೂಚಿಸುವುದು ಕಂಡುಬರುತ್ತದೆ. ಆದರೆ ಭಾಷಾಶಾಸ್ತ್ರಜ್ಞರು ವರ್ತಮಾನ ಕಾಲಕ್ಕೆ ಸ್ವತಂತ್ರ ಪ್ರತ್ಯಯವೊಂದಿಲ್ಲ ಎಂಬುದನ್ನು ನಿರ್ದೇಶಿಸಿ ಕನ್ನಡದಲ್ಲಿ ವರ್ತಮಾನಕಾಲವೇ ಇಲ್ಲ ಎಂದು ಸಿದ್ಧಾಂತಮಾಡುತ್ತಾರೆ. ಸ್ವತಂತ್ರ ಪ್ರತ್ಯಯವೇ ಇಲ್ಲ ಎಂಬುದು ಕಾಲ ವಿವಕ್ಷೆಯೇ ಇಲ್ಲ ಎಂಬ ಸಿದ್ಧಾಂತಕ್ಕೆ ಆಧಾರವಾಗಲಾರದು. ಪ್ರತ್ಯಯವೇ ಇಲ್ಲ ದಾಗ ಶೂನ್ಯ ಪ್ರತ್ಯಯಗಳು ಅರ್ಥವೃತ್ತಿಯನ್ನುಂಟುಮಾಡಬಹುದಷ್ಟೆ. ಆದ್ದರಿಂದ ಪ್ರತ್ಯಯ ಸ್ವರೂಪಕ್ಕಿಂತಲೂ ಅರ್ಥವೃತ್ತಿ ಮುಖ್ಯ.

'ಉತ್ತ', 'ಆನೆ' ಪ್ರತ್ಯಯಗಳೂ ಅವುಗಳಿಂದ ನಿಷ್ಪನ್ನವಾದ 'ಬರುತ್ತಾನೆ' ಕ್ರಿಯಾಪದವೂ ಆರಂಭದಲ್ಲಿ ವರ್ತಮಾನಕಾಲ ಸೂಚನೆಗೆಂದೇ ಉದ್ದಿಷ್ಟವಾಗಿದ್ದುವು. ಆದರೆ ಕ್ರಮೇಣ ಈ ವರ್ತಮಾನಕಾಲ ಕ್ರಿಯಾಪದದ ಅರ್ಥಪ್ರತೀತಿ ಬದಲಾವಣೆ ಯಾಗತೊಡಗಿತು. ಇದು ಏಕೆ? ಹೇಗೆ? ಎಂಬುದನ್ನು ಇಲ್ಲಿ ಇನ್ನಷ್ಟು ಕೂಲಂಕಷ ವಾಗಿ ಪರಿಶೀಲಿಸಬಹುದು. ಇಂತಹ ಬದಲಾವಣೆಯ ಸೂಚನೆಗಳು ಈಗಲೂ ತಲೆ ಹಾಕುತ್ತಿರುವುದನ್ನು ಗಮನಿಸಿದರೆ ಇದರ ರಹಸ್ಯ ಬಯಲಾಗುತ್ತದೆ.

'ಬರುತ್ತಾನೆ' ಕ್ರಿಯಾಪದವು ಆರಂಭದಲ್ಲಿ ವರ್ತಮಾನಕಾಲಕ್ಕಾಗಿಯೇ ರೂಪುಗೊಂಡಿದ್ದರೂ ಅದು ಕ್ರಮೇಣ ಭವಿಷ್ಯತ್‌ಕಾಲದಲ್ಲೂ 'ನಾಳೆ ಬರುತ್ತಾನೆ' ಎಂಬಂತೆ ಪ್ರಯೋಗವಾಗತೊಡಗಿತಷ್ಟೆ. ಕ್ರಮೇಣ ಅದಕ್ಕೆ ಭವಿಷ್ಯತ್‌ಕಾಲದ ಅರ್ಥವೇ ಗಟ್ಟಿ ಎನಿಸುವಂತಾಯಿತು. ಆಗ ಕೊರತೆಯನ್ನು ತುಂಬಲು 'ಇರು' ಧಾತುವಿನ ರೂಪಗಳು 'ಉತ್ತ'ದೊಡನೆ ಸೇರಿ 'ಬರುತ್ತಿದ್ದಾನೆ' ಎಂಬಂತೆ ವರ್ತಮಾನಕಾಲವನ್ನು ಸ್ಫುಟವಾಗಿ ಸೂಚಿಸಲು ನೆರವಾಗತೊಡಗಿದುವು. 'ಉತ್ತ+ಆನೆ'ಗಳೇ ವರ್ತಮಾನ ನಿರೂಪಣೆಗೆ ಸಾಕಾಗಿತ್ತು. ಅವು ಭವಿಷ್ಯತ್‌ಕಾಲಕ್ಕೂ ಪ್ರಯೋಗವಾಗತೊಡಗಿದ್ದರಿಂದ ಈ ಗೊಂದಲವುಂಟಾಯಿತು. ಆ ಕಾರಣಕ್ಕಾಗಿ 'ಇರು' ಸೇರಬೇಕಾಗಿ ಬಂದದ್ದು ಒಂದು ರೀತಿಯ ದ್ವಿರುಕ್ತಿ ಕ್ರಮ ಎನ್ನಬಹುದು. 'ಕೂಸು' ಎಂಬುದು ಹೆಣ್ಣು ಎಂಬ ಅರ್ಥವನ್ನು ಹೊಂದಿದ್ದರೂ ಅದು ಸಾಲದೇ ಹೆಣ್ಣು+ಕೂಸು ಆಗಿ ಅದು 'ಹೆಂಗುಸು' ಆಯಿತಲ್ಲವೆ ? ಕೆಲವು ವೇಳೆ ಈ ದ್ವಿರುಕ್ತಿಯೂ ಸಾಲದೆ ತ್ರಿರುಕ್ತಿಯೂ ಬರುವುದುಂಟಲ್ಲವೆ, 'ಹೆಣ್ಣುಹೆಂಗುಸು' ಎಂಬಂತೆ. ಅದೇ ರೀತಿ ಇಲ್ಲಿಯೂ ತ್ರಿರುಕ್ತಿಯುಂಟಾಗುವಷ್ಟು ಮಟ್ಟಿಗೆ ಭವಿಷ್ಯತ್ತು ವರ್ತಮಾನದೊಳಕ್ಕೆ ನುಗ್ಗುವಂತೆ ತೋರುತ್ತದೆ. ಉದಾಹರಣೆಗೆ "ನಾಳೆ ನನ್ನ ಮಗ ಬರುತ್ತಿದ್ದಾನೆ" ಎಂಬಂತಹ ಪ್ರಯೋಗಗಳಿಗೂ ಕೊರತೆ ಇಲ್ಲ. 'ಬರುತ್ತಾನೆ' ಎಂಬುದನ್ನೇ ನಾಳೆಗೆ ಸೇರಿಸಿ ಆಯಿತು. ಹೀಗಾಯಿತಲ್ಲ ಎಂದು ಅದಕ್ಕೆ 'ಇದ್ದಾನೆ'ಯನ್ನೂ ಸೇರಿಸಿ ವರ್ತಮಾನ ಕಾಲವನ್ನು ಸ್ಫುಟವಾಗಿ ಪ್ರತೀತಗೊಳಿಸಲು ಹೊರಟದ್ದಾಯಿತು. ಈಗ ಅದನ್ನೂ ಭವಿಷ್ಯತ್‌ಕಾಲಕ್ಕೆ ನೂಕುವ ಈ ಸೂಚನೆಗಳು ಕಂಡುಬರುತ್ತಿರುವುದು ವಿಚಿತ್ರವೇ ಸರಿ. ಇದು ಏಕೆ ಹೀಗಾಗುತ್ತದೆ ಎಂಬುದರ ಕಾರಣವನ್ನೂ ವಿಶದಪಡಿಸಬಹುದು. ಭವಿಷ್ಯತ್ಕಾಲದಲ್ಲಿ ನಡೆಯುವ ಆ ಘಟನೆ ವರ್ತಮಾನವೇದೇ ತಿಳಿಯಬಹುದಾದಷ್ಟು ಖಚಿತ; ಅದರಲ್ಲಿ ಅನುಮಾನ, ಅನಿಶ್ಚಿತತೆಗಳ ಅಂಶವೇ ಇಲ್ಲ (ಭವಿಷ್ಯತ್ತು ಯಾವಾಗಲೂ ಅನಿಶ್ಚಿತವಷ್ಟೆ?) ಎಂಬ ಭಾವನೆ ಮಾತನಾಡುವವನಲ್ಲಿ ಈ ರೀತಿ ವ್ಯಕ್ತವಾಗುವುದೇ ಹೀಗೆ ವರ್ತಮಾನ ಕಾಲಕ್ಕೆ ಮೀಸಲಾದ ಕ್ರಿಯಾಪದಗಳು ಭವಿಷ್ಯತ್‌ಕಾಲದ ಘಟನೆಗಳಿಗೂ ಪ್ರಯೋಗವಾಗುವುದರ ಹಿಂದಿನ ರಹಸ್ಯ. ಕ್ರಮೇಣ ಅವು ಭವಿಷ್ಯತ್ತಿನ ಅರ್ಥವನ್ನೇ ಗಟ್ಟಿ ಮಾಡಿಕೊಂಡರೆ ಆಗ ಸ್ಫುಟವಾದ ವರ್ತಮಾನಕಾಲದ ವಿವಕ್ಷೆಗೆ ಮತ್ತೆ ಇತರ ಉಪಾಯಗಳೂ ಪ್ರಯೋಗಗಳೂ ತಲೆ-ಹಾಕಬೇಕಾಗುತ್ತದೆ. ಹೀಗೆ 'ಬರುತ್ತಾನೆ' ಎಂಬುದು ಪ್ರತ್ಯಯಗಳ ದೃಷ್ಟಿಯಿಂದ ವರ್ತಮಾನ ಕಾಲದ ಕ್ರಿಯಾಪದವೇ ಆದರೂ ಕ್ರಮೇಣ ಅದು ಭವಿಷ್ಯತ್ತಿಗೇ ವರ್ಗಾವಣೆ ಪಡೆದು ವರ್ತಮಾನಕಾಲ ಪ್ರತೀತಿಗೆ ಅದರೊಡನೆ 'ಇರು' ಸಹಾಯಕ ಕ್ರಿಯಾಪದದ ಅಗತ್ಯವುಂಟಾದದ್ದು. ಭವಿಷ್ಯತ್ತನ್ನು ಆವರಿಸಿರುವ ಅನಿಶ್ಚಿತತೆಯನ್ನು ತೊಡೆದುಹಾಕುವ ಉತ್ಸಾಹದಲ್ಲಿ ವರ್ತಮಾನವನ್ನೇ ಅಲ್ಲಿಗೆ ವರ್ಗಾವಣೆ ಮಾಡಿದ್ದರಲ್ಲಿ ಆಶ್ಚರ್ಯವೇ ಇಲ್ಲ. ಏಕೆಂದರೆ ಕೆಲವು ವೇಳೆ ವರ್ತಮಾನದಲ್ಲೂ ನಂಬಿಕೆ

ಸಾಲದೇ ಹೋಗಿ ಅದನ್ನೂ ಕಿತ್ತುಹಾಕಿ ಭವಿಷ್ಯತ್ತಿನ ಆದರ ಸ್ಥಾನದಲ್ಲಿ ಭೂತಕಾಲವನ್ನೇ ಇರಿಸುವ ವೈಚಿತ್ರ್ಯಗಳೂ ಉಂಟು. ಉದಾ: "ಈಗ ಹೋದ; ನಾಳೆ ಮತ್ತೆ ಬಂದ." ಕಾಲಚಕ್ರದ ಈ ತಿರುಗುವಿಕೆಗೆ ನೆಲೆಯುಂಟೆ? ಇದಕ್ಕೆಲ್ಲ ಸಮಾಧಾನ ಹೇಳಲು ನಾವು ಕಾಲಾತೀತರಾಗಬೇಕಾಗುತ್ತದೆ. "ಕಾಲಾಯ ತಸ್ಮೈ ನಮಃ".

ವರ್ತಮಾನಕಾಲದ ನಿಖರತೆಯ ಪ್ರತೀತಿಗಾಗಿ 'ಉತ್ತ' ಪ್ರತ್ಯಯದ ಪರದಲ್ಲಿ 'ಇರು' ಧಾತುವಿನ ಸಹಾಯಕ ಕ್ರಿಯಾರೂಪಗಳ ಆವಶ್ಯಕತೆಯುಂಟಾಯಿತೆಂದು ಹೇಳಲಾಯಿತಷ್ಟೆ. 'ಇರು' ಧಾತುವಿಗೆ ಮಾತ್ರವೇ ಈ ಪ್ರಕ್ರಿಯೆ ಸೀಮಿತವಾಗಲು ಕಾರಣವನ್ನು ತಿಳಿಯುವುದೂ ಕಷ್ಟವಲ್ಲ. ಹಳಗನ್ನಡದ 'ದಪ' ಪ್ರತ್ಯಯವು ನಡುಗನ್ನಡದಲ್ಲಿ 'ದಪ' ಆಗಿ ಬಂದಪನ್ > ಬಂದಹನು > ಬಂದಾನು ಎಂದಾಗಿ ಸಂದೇಹಸೂಚಕವಾದ ಅರ್ಥವೊದಗಿ, ಸಂಭಾವನಾರ್ಥದಂತೆ ಅದು ತೋರಿಗೊಂದಲವುಂಟಾಯಿತು. ಆಗ ವರ್ತಮಾನ ಕಾಲಪ್ರತೀತಿಗೆ ಧಕ್ಕೆಯೊದಗಿದ್ದನ್ನು ಹೋಗಲಾಡಿಸಿ ಕೊರತೆಯನ್ನು ನೀಗಲು ವರ್ತಮಾನ ನ್ಯೂನ ಪ್ರತ್ಯಯವಾದ 'ಉತ್ತ' ವನ್ನು ತೆಗೆದುಕೊಂಡು ಅದಕ್ಕೆ ಪ್ರೂ.ಹ.ದ 'ಆನ್' ಇತ್ಯಾದಿ ಪುರುಷವಾಚಕ ಪ್ರತ್ಯಯಗಳಿಗೆ ಅವಧಾರಣೆಯ 'ಎ'ವನ್ನು ಸೇರಿಸಿ 'ಆನೆ' ಇತ್ಯಾದಿ ಪ್ರತ್ಯಯಗಳನ್ನು ಸಿದ್ಧಪಡಿಸಿಕೊಂಡಾಯಿತಷ್ಟೆ. 'ಉತ್ತ' ಪ್ರತ್ಯಯದಲ್ಲಿಯೇ ಕ್ರಿಯೆಯ ಮುಂದುವರಿಕೆ (continuity) ಯ ಪ್ರತೀತಿ ಸ್ಪಷ್ಟವಾಗಿಯೇ ಇದೆ. ಇದ್ದರೂ ಮಾಸಿಹೋದ ವರ್ತಮಾನ ಪ್ರತೀತಿಗೆ ಅದು ಸಾಲದೆಂಬಂತಾಗಿ ಯಾವುದೇ ಧಾತು-ವಿನ ವರ್ತಮಾನ ನ್ಯೂನದ ಮುಂದೆ 'ಇರು' ಧಾತುವಿನ ರೂಪಗಳಾದ 'ಇದ್ದಾನೆ' ಇತ್ಯಾದಿಗಳು ಸಹಾಯಕ ಕ್ರಿಯಾಪದಗಳಾಗಿ ಸೇರಿದಾಗ ವರ್ತಮಾನಕಾಲವೇ ನಿಷ್ಕೃಷ್ಟವಾಗಿ ಪ್ರತೀತವಾಗುವಂತಾಯಿತು. 'ಇರು' ಧಾತುವನ್ನೇ ಏಕೆ ಆರಿಸಿಕೊಳ್ಳಲಾಗಿದೆ ಎಂದರೆ 'ಇರು' ಧಾತುವಿನ ಅರ್ಥವೇ 'to be present'. ಆದ್ದರಿಂದ 'ಉತ್ತ' ಪ್ರತ್ಯಯವಾಗಿ ಸೂಚಿಸುವ ಅರ್ಥವನ್ನೇ 'ಇರು' ಧಾತುವಾಗಿ ಮತ್ತೊಮ್ಮೆ ಸೂಚಿಸುತ್ತದೆ. ವರ್ತಮಾನದ ಅರ್ಥಸೂಚನೆ 'ಇರು'ವಿನಲ್ಲಿ ಅಂತರ್ಗತವಾಗಿದ್ದು, 'ಉತ್ತ'ದೊಡನೆ 'ಇದ್ದಾನೆ' ಇತ್ಯಾದಿ ರೂಪಗಳು ಸೇರಿ ಮುಖ್ಯ ಕ್ರಿಯಾಪದಕ್ಕೆ ವರ್ತಮಾನ ಪ್ರತೀತಿಯನ್ನು ಅನಿವಾರ್ಯವಾಗಿ ಕೊಡುವಂತಾಗುತ್ತದೆ. ಇಲ್ಲಿ ಅನಿವಾರ್ಯವಾಗಿ ಎಂದು ಹೇಳಲು ಕಾರಣವಿದೆ. ಏಕೆಂದರೆ 'ಉತ್ತ' ಪ್ರತ್ಯಯದಿಂದ ಕೂಡಿದ ವರ್ತಮಾನ ನ್ಯೂನದ ಪರದಲ್ಲಿ ಬರುವ 'ಇರು' ಧಾತುವಿನ ಸಹಾಯಕ ಕ್ರಿಯಾಪದವು ವರ್ತಮಾನಕಾಲದ ಬದಲು ಭವಿಷ್ಯತ್‌ಕಾಲ ಪ್ರತ್ಯಯವನ್ನು ಪಡೆದಿರುವಾಗಲೂ ಒಟ್ಟು ಕ್ರಿಯಾಪದವು ಎಂದಿನಂತೆ ವರ್ತಮಾನ ಕಾಲವನ್ನೇ ಸೂಚಿಸುತ್ತದೆ. ಗದುಗಿನ ಭಾರತದಿಂದ ಇಂದಿನವರೆಗೂ ಇದಕ್ಕೆ ಉದಾಹರಣೆಗಳನ್ನು ಕೊಡಬಹುದು.

ಉದಾ : ಹೊಸಗನ್ನಡ : ಹೊತ್ತು ಮುಳುಗುತ್ತಿಹುದು
ಕತ್ತಲಾಗುತ್ತಿಹುದು
ಎತ್ತಲೂ ಹಕ್ಕಿಗಳು ಗೂಡಬಳಿಗೆ
ಮಕ್ಕಳು ಮಲಗುವ ಹೊತ್ತಾಯಿತು.

'ಮುಳುಗುತ್ತಾ + ಇಹುದು' ಎಂಬಲ್ಲಿ 'ಇಹುದು' ಸಹಾಯಕ ಕ್ರಿಯಾಪದವು (ಇ + ಹು + ಉದು) ಭವಿಷ್ಯತ್‌ಕಾಲ ಪ್ರತ್ಯಯವನ್ನು ಪಡೆದಿದ್ದರೂ ಅದು 'ಇರುವುದು' ಎಂಬ ಭವಿಷ್ಯತ್‌ಕಾಲದ ಅರ್ಥವನ್ನು ಸೂಚಿಸುವ ಬದಲು 'ಇದೆ' ಎಂಬ ವರ್ತಮಾನಕಾಲದ ಅರ್ಥವನ್ನೇ ಕೊಡುವುದನ್ನು ಕಾಣಬಹುದು. 'ಹೊತ್ತು ಮುಳುಗುತ್ತಿಹುದು' ಎಂದರೆ 'ಹೊತ್ತು ಮುಳುಗುತ್ತಿದೆ' ಎಂಬ ನಿಶ್ಚಿತ ವರ್ತಮಾನದ ಅರ್ಥವುಂಟಾಗುತ್ತದೆ.

ನಡುಗನ್ನಡ :

"ತಮದಲಿ ಬೆಳಗ ಬಣ್ಣಿಸುತಿಹೆ ನಿರಂತರವೆಂದನಾ ಚೈದ್ಯ"
(ಕು,ವ್ಯಾ.ಸ.ಪ. 10–11)

ಎಂದರೆ "ತಮದಲಿ ಬೆಳಕನ್ನು ಬಣ್ಣಿಸುತ್ತಿದ್ದೀಯೆ" ಎಂದು ಖಚಿತ ವರ್ತಮಾನ ಕಾಲವನ್ನು ಪರಿಭಾವಿಸಲಾಗುತ್ತದೆ.

"ಬಯಲಗ್ಗಳಿಕೆಯನೆ ಬಿಡೆ ಕೆದರುತಿಹೆ ಮಾಣೆಂದು ನೃಪ ನುಡಿದ" (ಕರ್ಣಪ.-16–26) ಕೆದರುತಿಹೆ = ಕೆದರುತ್ತಿದ್ದೀಯೆ

"ಕೃಷ್ಣನ ಪದಯುಗವನೋಲೈಸುತಿಹರಬುಜಾಕ್ಷಿ ಕೇಳೆಂದ" (ಅ.ಪರ್ವ 13–60) ಓಲೈಸುತಿಹರು = ಓಲೈಸುತ್ತಿದ್ದಾರೆ

"ನಿಮ್ಮಯ ರೋಮಕೂಪದ ಹೊರೆಯೊಳಗೆ ಹೊಳೆದಾಡುತಿಹುದೆಂಬಗ್ಗಳಿಕೆ ಗಳಿಗೆ (ಭೀಷ್ಮಪ. 3–62) ಹೊಳೆದಾಡುತಿಹುದು = ಹೊಳೆದಾಡುತ್ತಿದೆ

ಮೇಲಿನ ಉದಾರಣೆಗಳಲ್ಲಿ ಸ್ಫುಟವಾಗಿ ವರ್ತಮಾನಕಾಲವಿವಕ್ಷೆಯಿರುವುದು ಕಂಡುಬರುತ್ತದೆ.

ಮೂರು ಕಾಲಗಳ ಪ್ರತ್ಯೇಕತೆ ಅಪೂರ್ಣ ಕ್ರಿಯಾಪದಗಳಲ್ಲಿ ಇನ್ನೂ ಸ್ಪಷ್ಟ ವಾಗಿರುವುದು ಇದಕ್ಕೆ ಪೂರಕವಾದ ಅಂಶವೆಂದು ಕಡೆಯದಾಗಿ ಹೇಳಬಹುದು. 'ಉತ್ತ' ಪ್ರತ್ಯಯ ಸೇರಿದ 'ಬರುತ್ತಾ', 'ಹೋಗುತ್ತಾ' ರೂಪಗಳು ವರ್ತಮಾನ ನ್ಯೂನವನ್ನು ಸೂಚಿಸಿದರೆ ಭವಿಷ್ಯತ್‌ಕಾಲದ ಪ್ರತ್ಯೇಕತೆ 'ಬರ್ಪನ್ನಂ' 'ಪೋಪನ್ನಂ' 'ಬರುವವರೆಗೆ', 'ಹೋಗುವವರೆಗೆ' ಇತ್ಯಾದಿಗಳಿಂದ ಸೂಚಿಸಲ್ಪಡುತ್ತದೆ. ಹೀಗಿರುವಲ್ಲಿ ಕನ್ನಡದಲ್ಲಿ ವರ್ತಮಾನಕಾಲವೇ ಇಲ್ಲ, ವರ್ತಮಾನಕಾಲಕ್ಕೆ ಪ್ರತ್ಯೇಕ ಪ್ರತ್ಯಯವೇ ಇಲ್ಲ ; ಇರುವುದು–ಭೂತ–ಅಭೂತ–ಎರಡೇ ಕಾಲಗಳು ಎಂಬುದು ತರ್ಕಬದ್ಧವಲ್ಲದ ಸಿದ್ಧಾಂತ ಎಂಬುದು ಸ್ಪಷ್ಟ. ಈ ಬಗೆಗೆ ಭಾಷಾ ವಿಜ್ಞಾನಿಗಳು, ವಿದ್ವಾಂಸರು ಗಮನ ಹರಿಸಲೆಂಬುದೇ ನನ್ನ ಆಶಯ.

---

# ಭರತನ ನಾಟ್ಯಶಾಸ್ತ್ರ ಮತ್ತು ಭಾರತೀಯ ರಂಗ ಸಂಪ್ರದಾಯ

—ಡಾ। ಚಂದ್ರಮೌಳಿ ನಾಯ್ಕರ್

ನಾಟ್ಯಶಾಸ್ತ್ರದ ಕರ್ತಾರನೆಂದು ಭರತನು ಪ್ರಸಿದ್ಧನಾಗಿದ್ದಾನೆ. ಪೌರಾಣಿಕ ವ್ಯಕ್ತಿಯಾದ ಈತನ ಕೀರ್ತಿಯು ದೇವಲೋಕದಿಂದ ಹಿಡಿದು ಭೂಮಿಯವರೆಗೆ ವ್ಯಾಪಿಸಿದೆ. ಐತಿಹಾಸಿಕ ಗ್ರಂಥಗಳಲ್ಲಿ ದಶರಥ ಪುತ್ರ ಭರತ, ದುಷ್ಯಂತ ಪುತ್ರ ಭರತ, ಮಾಂಧಾತೃವಿನ ಪ್ರಪೌತ್ರನಾದ ಭರತ ಮತ್ತು ಜಡಭರತ—ಇವರೆಲ್ಲರೂ ರಾಜ-ವಂಶಕ್ಕೆ ಸಂಬಂಧಪಟ್ಟವರಾದುದರಿಂದ ನಾಟ್ಯಶಾಸ್ತ್ರವನ್ನು ಬರೆದ ಭರತರಾಗರು. (ಪುರಾಣೋಲ್ಲಿಖಿತನಾದುದರಿಂದ ಭರತಮುನಿಯು ಐತಿಹಾಸಿಕ ವ್ಯಕ್ತಿಯಾಗಿರಬೇಕೇ ಹೊರತು ಕಲ್ಪಿತ ವ್ಯಕ್ತಿಯಾಗಿರಲು ಸಾಧ್ಯವಿಲ್ಲ). ನಾಟ್ಯಶಾಸ್ತ್ರಕ್ಕನುಸಾರವಾಗಿ ಭರತಮುನಿಯು ಬ್ರಹ್ಮನಿಂದ ನಾಟ್ಯವೇದವನ್ನು ಪಡೆದಂತೆಯೂ, ತನ್ನ ನೂರು ಮಕ್ಕಳಿಗೆ ನಾಟ್ಯವೇದವನ್ನು ಹೇಳಿಕೊಟ್ಟಂತೆಯೂ ಅವರಲ್ಲನೇಕರು ನಾಟ್ಯವಿಷಯಕ ಗ್ರಂಥಗಳನ್ನು ಬರೆದಂತೆಯೂ ಪ್ರಖ್ಯಾತರಾಗಿದ್ದಾರೆ. ಭರತನು ತಾನೇ ಸ್ವತಃ 'ಮಹೇಂದ್ರವಿಜಯ (ನಾಟಕ)', 'ತ್ರಿಪುರದಾಹ (ಡಿಮ)' ಹಾಗೂ 'ಅಮೃತ-ಮಂಥನ (ಸಮವಕಾರ)'ಗಳೆಂಬ ರೂಪಕಗಳ ಅಭಿನಯಗಳನ್ನು ಮಾಡಿದಂತೆ ಕೀರ್ತಿತನಾಗಿದ್ದಾನೆ. ನಾಟ್ಯ ಮಂಡಪದ ಆದ್ಯಪ್ರವರ್ತಕನೆಂದೂ ಭರತಮುನಿ ಹೆಸರಾಗಿದ್ದಾನೆ.

ಭರತಮುನಿಯು ನಾಟ್ಯವಿದ್ಯೆಯ ಸೂತ್ರಕಾರ ರೂಪದಿಂದ ಕಂಗೊಳಿಸುತ್ತಿದ್ದಾನೆ. ಸೂತ್ರರೂಪದಲ್ಲಿ ಶಾಸ್ತ್ರೀಯ ತತ್ತ್ವಗಳನ್ನು ಪ್ರತಿಪಾದಿಸುವ ಪ್ರವೃತ್ತಿಯು ಈ ಗ್ರಂಥದ ಮುಖ್ಯ ಶೈಲಿಯಾಗಿದೆ. ನಾಟ್ಯಶಾಸ್ತ್ರದಲ್ಲಿ ಭರತ ಶಬ್ದವು ಅಭಿನೇತೃ, ಸೂತ್ರಧಾರ ಮುಂತಾದ ಅರ್ಥದಲ್ಲಿ ಪ್ರಯುಕ್ತವಾಗಿರುವುದು.

ಮನೋವಿನೋದನ ಸಾಧನವಾದ ಕ್ರೀಡನೀಯಕವೇ ನಾಟ್ಯ. ಇದು ದೃಶ್ಯವೂ ಇರಬಹುದು, ಶ್ರವ್ಯವೂ ಇರಬಹುದು. ನಾಟಕ ಚಿತ್ರಾದಿಗಳು ನೋಡತಕ್ಕವರಿಗೂ, ರಾಮಾಯಣ ಮಹಾಭಾರತಾದಿ ಕಾವ್ಯಗಳು ಓದುವವರಿಗೂ ಮನೋವಿನೋದವನ್ನುಂಟುಮಾಡುವುವು. ಕೇವಲ ಮನೋರಂಜನೆಯಾದರೆ ಸಾಲದು : ಮಾನವನ ನಡೆನುಡಿಗಳನ್ನು ತಿದ್ದಿ ದುಃಖ, ಮೋಹ, ಮದ, ಮಾತ್ಸರ್ಯಗಳಿಂದ ಮಾನವನನ್ನು ದೂರವಾಗುವಂತೆ ಮಾಡಿ, ಪರರ ದುಃಖಗಳಿಗಾಗಿ ಮರುಗಿ ತಾನೂ ಅವರ ಸಹಾಯಕ್ಕೆ ನಿಂತು ಅತಿಮಾನವನನ್ನಾಗಿಸುವುದು ಅವುಗಳ ಧ್ಯೇಯ.

> ಧರ್ಮ್ಯಮರ್ಥ್ಯಂ ಯಶಸ್ಯಂ ಚ ಸೋಪದೇಶ್ಯಂ ಸಸಂಗ್ರಹಂ ।
> ಭವಿಷ್ಯತಶ್ಚ ಲೋಕಸ್ಯ ಸರ್ವಕರ್ಮಾನುದರ್ಶಕಂ ॥
> ಸರ್ವಶಾಸ್ತ್ರಾರ್ಥಸಂಪನ್ನಂ ಸರ್ವಶಿಲ್ಪಪ್ರವರ್ತಕಂ ।
> ನಾಟ್ಯಾಖ್ಯಂ ಪಂಚಮಂ ವೇದಂ ಸೇತಿಹಾಸಂ ಕರೋಮ್ಯಹಂ ॥ (ನಾ.ಶಾ. 1-15)

ಈ ನಾಟ್ಯವು ಧರ್ಮಾರ್ಥಪ್ರಾಪಕವಾದುದು. ಕೀರ್ತಿಯನ್ನು ತಂದುಕೊಡುವುದು. ಉಪದೇಶಸೂಚಕ, ಮುಂದಿನ ಜಗತ್ತಿನ ಜನಕ್ಕೆ ಕಾರ್ಯ ಮಾರ್ಗಸೂಚಕವೂ ಶಾಸ್ತ್ರಾರ್ಥ ಪರಿಪೂರ್ಣವೂ, ಸಮಸ್ತ ಶಿಲ್ಪ ಪ್ರದರ್ಶಕವೂ ಆದುದು: ಇದು ಪಂಚಮ ವೇದವೆಂದೂ, ನಾಟ್ಯಶಾಸ್ತ್ರವೆಂದೂ ಪ್ರಖ್ಯಾತಿ ಹೊಂದಿದೆ. 36 ಅಧ್ಯಾಯಗಳಿಂದ ವಿಜೃಂಭಿಸುವ ಈ ಕೃತಿಯು (ಕಾವ್ಯವು) ಸಂಗೀತ, ನೃತ್ಯ, ಶಿಲ್ಪ ಹಾಗೂ ಅನ್ಯ ಲಲಿತಕಲೆಗಳ ಗಣಿಯಾಗಿದೆ. ಇದು ನಾಟಕೀಯ ಕಲೆಯನ್ನು ಸಾವಿರಾರು ವರ್ಷಗಳಿಂದ ಪ್ರಭಾವಯುಕ್ತವನ್ನಾಗಿ ಮಾಡಿದೆ. ಭಾರತೀಯ ನಾಟ್ಯಶಾಸ್ತ್ರದ, ನಾಟ್ಯ-ಕಲೆಯ ಕಲ್ಪನೆಯು ದುರೂಹನೀಯವಾಗಿದೆ. ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿದ್ದ ನಾಟ್ಯಕಲೆಯ ಸ್ವರೂಪ, ತತ್ತ್ವ ಹಾಗೂ ಪ್ರಕೃತಿಗಳನ್ನು ಹೃದಯಂಗಮಗೊಳಿಸ-ಲಿಕ್ಕೆ ನಾಟ್ಯಶಾಸ್ತ್ರವು ಏಕಮಾತ್ರ ಸಾಧನವಾಗಿದೆ. ಇಲ್ಲಿ ನಾಟ್ಯರಂಗಗಳಿಗೆ ಸಂಬಂಧಿಸಿದ ಕಾವ್ಯ, ಶಿಲ್ಪ, ಸಂಗೀತ ಮತ್ತು ನೃತ್ಯವೇ ಮೊದಲಾದ ಲಲಿತ ಕಲೆಗಳಿಗೆ ವಿಸ್ತೃತ ವಿವರಣೆಗಳು ಸಿಗುತ್ತವೆ. ಈ ಗ್ರಂಥದ ವಿವಿಧತೆಯು ಇದನ್ನು ನಾಟ್ಯಶಾಸ್ತ್ರ, ಶಿಲ್ಪ ಹಾಗೂ ವಿದ್ಯೆಗಳ ವಿಶ್ವಕೋಶವನ್ನಾಗಿಸಿದೆ.

ಇದನ್ನು 'ನಾಟ್ಯವೇದ'ವೆಂದು ಕರೆದಿರುವರು. ಭಾರತೀಯರ ದೃಷ್ಟಿಯಲ್ಲಿ ಎಲ್ಲ ಶಾಸ್ತ್ರಗಳಿಗೂ, ಎಲ್ಲ ವಿಜ್ಞಾನಕ್ಕೂ ವೇದವೇ ಮೂಲ. ಹಾಗೆಯೇ ನಾಟ್ಯ ಶಾಸ್ತ್ರಕ್ಕೂ ವೇದ ಮೂಲವಾಗಿದೆ.

> ಋಗ್ಯಜುಸ್ಸಾಮವೇದೇಭ್ಯೋ ವೇದಾಚ್ಚಾಥರ್ವಣಕ್ರಮಾತ್
> ಪಾಠ್ಯಂ ಚಾಭಿನಯಂ ಗೀತಂ ರಸಾನ್ ಸಂಗೃಹ್ಯ ಪದ್ಮಜಃ ॥
> ವ್ಯರೀರಚಚ್ಛಾಸ್ತ್ರಮಿದಂ ಧರ್ಮಕಾಮಾರ್ಥಮೋಕ್ಷದಂ ॥

ಈ ಸೂಕ್ತಿಯಂತೆ ಬ್ರಹ್ಮನು ಮೊದಲು ನಾಲ್ಕು ವೇದಗಳನ್ನು ಸೃಷ್ಟಿಸಿ ಪಾಠ್ಯಾಭಿ-ನಯ ಸಂಗೀತರಸಗಳನ್ನು ಅವುಗಳಿಂದ ಸಂಗ್ರಹಿಸಿ, ಧರ್ಮ, ಅರ್ಥ, ಕಾಮ, ಮೋಕ್ಷಸಾಧಕವಾದ ನಾಟ್ಯವೇದವನ್ನು ರಚಿಸಿದನು. ಆ ಮೇಲೆ ಪ್ರಯೋಗಾರ್ಥವಾಗಿ ಭರತಮುನಿಗೆ ಇದನ್ನು ತಿಳಿಸಿದನೆಂದು ಪ್ರಾಚೀನರ ವಿಶ್ವಾಸ. ಜಗತ್ತಿನ ಆದಿ ದಂಪತಿಗಳಾದ ಶಿವ ಪಾರ್ವತಿಯರೇ ಪ್ರಥಮ ನರ್ತಕರೆಂಬುದು ನಮ್ಮ ನಂಬಿಕೆ.

ಪಾರತಂತ್ರ್ಯದ ಪರಿಣಾಮವಾಗಿ, ಸಾಂಸ್ಕೃತಿಕ ದಾಸ್ಯದಿಂದ ಭಾರತೀಯರ ಶಾಸ್ತ್ರಜ್ಞಾನ ಒಂದು ಕಾಲಕ್ಕೆ ಮೊಟಕಾಯಿತು. ಇಂದು ಭಾರತ ಸ್ವತಂತ್ರವಾಗಿದೆ. ಇಂಥ ಕಾಲದಲ್ಲಿ ನಮ್ಮ ಅದ್ಭುತವಾದ ಪ್ರಾಚೀನ ಶಾಸ್ತ್ರ ಸಂಪತ್ತಿನ ಮೌಲ್ಯವನ್ನು ಅರಿಯಬೇಕಾದುದು ಅಗತ್ಯ. ಇಂದು ಸಾಹಿತ್ಯ, ನಾಟಕ, ನೃತ್ಯ, ಸಂಗೀತ ಕ್ಷೇತ್ರಗಳಲ್ಲಿ ಹೊಸ ಹೊಸ ಪ್ರಯೋಗಗಳು ನಡೆಯುತ್ತಿವೆ. ಹೊಸ ರುಚಿಯೊಂದು ಭಾರತೀಯ ಸಭ್ಯನನ್ನು ಸೆಳೆದುಕೊಳ್ಳುತ್ತಿದೆ. ಇಂಥ ಕಾಲದಲ್ಲಿ ನಮ್ಮ ಶಾಸ್ತ್ರಗ್ರಂಥ

ಗಳಲ್ಲಿ ಸೂಚಿಸಿರುವ ಸಿದ್ಧಾಂತಗಳ, ಪ್ರಯೋಗಗಳ ಅರಿವು, ಅವುಗಳ ಮೌಲ್ಯಮಾಪನ ಇವೆರಡೂ ನಮ್ಮ ಜನಕ್ಕೆ, ವಿದ್ವಾಂಸರಿಗೆ, ಶ್ರೀಸಾಮಾನ್ಯರಿಗೆ ಅತ್ಯಗತ್ಯ.

ನಾಟ್ಯಶಾಸ್ತ್ರ ಯಾರಿಗಾಗಿ ? ಸುಖ-ದುಃಖ ಮಿಶ್ರಿತವಾದ ಸಂಸಾರದಲ್ಲಿ ತೊಡಗಿರುವ ಮಾನವರಿಗಾಗಿ; ಅವರ ವಿನೋದಕ್ಕಾಗಿ, ಆನಂದಕ್ಕಾಗಿ, ಶ್ರೇಯಸ್ಸಿಗಾಗಿ.

ರಸಾ ಭಾವಾ ಹ್ಯಭಿನಯಾಃ ಧರ್ಮೀವೃತ್ತಿ ಪ್ರವೃತ್ತಯಃ
ಸಿದ್ಧಿಃ ಸ್ವರಾಃ ತಥಾತೋದ್ಯಂ ಗಾನಂ ರಂಗಶ್ಚ ಸಂಗ್ರಹಃ ॥

ರಸ, ಭಾವ, ಅಭಿನಯ, ಧರ್ಮ, ವೃತ್ತಿ, ಪ್ರವೃತ್ತಿ, ಸಿದ್ಧಿ, ಸ್ವರ, ಆತೋದ್ಯ, ಗಾನ ರಂಗಗಳಲ್ಲಿ ಕೂಡಿದ್ದು, 'ನಾಟ್ಯವೇದ–ನಾಟ್ಯಪಂಚಾಂಗ'.

ಇನ್ನು ಭಾರತೀಯ ರಂಗಭೂಮಿಯ ಸಂಪ್ರದಾಯವನ್ನು ಕುರಿತು ಅವಲೋಕಿಸುವಾಗ ಭಾರತೀಯ ರಂಗಭೂಮಿಯ ಪರಂಪರೆಗೂ ಇಂದಿನ ಅನೇಕ ವಾದಗಳಾದ ವಾಸ್ತವವಾದ, ಪ್ರಜ್ಞಾಪ್ರವಾಹವಾದ, ಪ್ರತ್ಯೇಕತಾವಾದ, ಪ್ರತಿಮಾವಾದವೇ ಮೊದಲಾದ ವಾದಗಳಿಗೂ ಏನೂ ಸಂಬಂಧವಿಲ್ಲವೆನಿಸುವುದು. ಏಕೆಂದರೆ ಅವು ಬೇರೆ ಬೇರೆ ಸಂಸ್ಕೃತಿಗಳಿಂದ ಬಂದಂಥವಾಗಿವೆ.

ಭಾರತದಲ್ಲಿ ರಂಗಭೂಮಿಯ ಪುನರುಜ್ಜೀವನವು ಒಮ್ಮೆಲೇ ಆಗಲಿಲ್ಲ. ನಮ್ಮ ವಿದ್ವಾಂಸರ ಸಂಶೋಧನೆಯಿಂದ ಈ ಪರಂಪರೆ ಬೆಳಕಿಗೆ ಬಂದಿದೆ. ನಾಟ್ಯ-ಶಾಸ್ತ್ರ ಹಾಗೂ 'ದಶರೂಪಕ'ಗಳಂಥ ಕೃತಿಗಳಿಂದ ನಮ್ಮ ರಂಗಭೂಮಿಯ ಸಾಹಿತ್ಯ–ಚಟುವಟಿಕೆಗಳು ಎಷ್ಟೋ ಶತಮಾನಗಳಿಂದ ಶ್ರೀಮಂತವಾಗಿದ್ದುದು ತಿಳಿದುಬರುವುದು. ನಾಟ್ಯಶಾಸ್ತ್ರ ಮತ್ತು ಅಂಥ ಇನ್ನಿತರ ಕೃತಿಗಳಿಗಿಂತಲೂ ಮೊದಲು ಹಾಗೂ ಅನಂತರ ನಾಟಕಗಳು ಮತ್ತು ನಾಟಕರಂಗಗಳು ಇದ್ದುವು ಎಂಬುದು ಸ್ಪಷ್ಟವಾಗಿದೆ. ನಾಟಕದ ವಸ್ತು ಆಕರ್ಷಕವಿರಲಿ ಬಿಡಲಿ, ಮಹತ್ತ್ವದ್ದಾಗಿರಲಿ ಇರದಿರಲಿ, ಕವಿಯ ಪ್ರತಿಭೆ ಮತ್ತು ರಸಜ್ಞರ ರಸಗ್ರಹಣಗಳಿಂದ ಎಂಥದೂ ಮಹೋನ್ನತ ಕಲೆಯಾಗದಿರುವುದು ಅಸಾಧ್ಯ.

ರಂಗಭೂಮಿಯ ಉದ್ದೇಶ, ಮನೋರಂಜನೆಯದಾಗಿರುವಾಗ ನಾಟಕವನ್ನು ತಂದೆ ತಾಯಿ ಮಗಳು ಮಗ ಹೀಗೆ ಎಲ್ಲರೂ ಒಟ್ಟಾಗಿ ಕುಳಿತು ನೋಡುತ್ತಿರುವರಾದ್ದರಿಂದ ರಂಗಭೂಮಿಯ ಮೇಲೆ ಅಸಭ್ಯ, ಬೀಭತ್ಸ ಘಟನೆಗಳನ್ನು ತೋರಿಸಬಾರದೆಂದು ಭರತನು ಹೇಳಿದ್ದು ಔಚಿತ್ಯಪೂರ್ಣವಾಗಿದೆ.

ಆದ್ಯ ರಂಗಾಚಾರ್ಯರು ಭಾರತೀಯ ರಂಗದ ಸಂಪ್ರದಾಯದ ಬಗ್ಗೆ ಬರೆಯುತ್ತ ಈ ವಿವರಗಳನ್ನು ಹೇಳುತ್ತಾರೆ: "ಎರಿಸ್ಟೋಫನೀಸ್‌ನ ಗ್ರೀಕ್ ನಾಟಕಗಳಲ್ಲಿ ಮಾತ್ರ ಅಸಭ್ಯದ ಸನ್ನಿವೇಶಗಳು ಹೆಚ್ಚಿದ್ದವು. ಕೆಲವು ಪ್ರಾಕೃತ ನಾಟಕಗಳಲ್ಲಿ

ಬೌದ್ಧ ಧರ್ಮವನ್ನು ಕುಚೋದ್ಯ ಮಾಡಿದ್ದುಂಟು. ಭರತಮುನಿ ರಂಗಭೂಮಿಯಲ್ಲಿ ಶಿಸ್ತು ತರಲು ಪ್ರಯತ್ನಿಸಿದನು. 18 ಬಗೆಯ ಉಪನಾಟಕಗಳನ್ನು ಬಿಟ್ಟುಕೊಟ್ಟು ಹತ್ತು ಪ್ರಕಾರಗಳನ್ನು ವಿಂಗಡಿಸಿ 'ನಾಟಿಕಾ ಹಾಗೂ ಪ್ರಹಸನ' ಎಂಬ ಎರಡು ಪ್ರಕಾರಗಳನ್ನು ಮಾತ್ರ ಶಿಫಾರಸು ಮಾಡುತ್ತಾನೆ. ಆತನ ಕೃತಿಯನ್ನು 'ನಾಟ್ಯವೇದ'ವೆಂದು ವರ್ಣಿಸಲಾಗಿದೆ. ಉಳಿದ ನಾಲ್ಕು ವೇದಗಳಂತೆ ಅದು ಎಲ್ಲರಿಗೂ ಪ್ರವೇಶವುಳ್ಳದ್ದು. ರಂಗಭೂಮಿಯಿಂದ ಮನೋರಂಜನದ ಜೊತೆಗೆ ಶಿಕ್ಷಣವೂ ಸಿಗುತ್ತಿತ್ತು. ಸಾವಿರ ವರ್ಷಗಳಿಂದಲೂ ಭಾರತದಲ್ಲಿ ಇದೇ ಪರಂಪರೆ ಬೆಳೆದುಬಂದಿದೆ. ಭರತನ ಶಾಸ್ತ್ರ ಕೇವಲ ಸಂಸ್ಕೃತ ಮತ್ತು ಅದರಿಂದ ಹುಟ್ಟಿದ ಭಾಷೆಗಳ ನಾಟಕಗಳನ್ನಷ್ಟೇ ಅಲ್ಲ, ದ್ರಾವಿಡ ಭಾಷೆಯ ನಾಟಕಗಳ ಮೇಲೂ ಪ್ರಭಾವ ಬೀರಿದೆ."

ಇನ್ನು ಭರತನ ಅಭಿಪ್ರಾಯದಲ್ಲಿ ಹೇಳುವುದಾದರೆ ನಾಟಕದ ಕಥೆ ಪ್ರೇಕ್ಷಕರಿಗೆ ಗೊತ್ತಿರುವ ಕಥೆಯಿರಬೇಕು. ಅಂದರೇನೇ ಅವರು ಅದನ್ನು ಆಸ್ವಾದಿಸಬಲ್ಲರು. ನಾಟಕದ ಆರಂಭದಲ್ಲಿ ನೃತ್ಯ ಸಂಗೀತಗಳನ್ನು ಅಳವಡಿಸಿಕೊಳ್ಳಬೇಕು ಎಂದು ಶಿಫಾರಸು ಮಾಡುತ್ತಾನಲ್ಲದೆ ಅವುಗಳನ್ನು ಪ್ರಣಯ, ಹಾಸ್ಯ ಸನ್ನಿವೇಶಗಳಲ್ಲಿ ಜಾಣ್ಮೆಯಿಂದ ಬಳಸಬೇಕು ಎಂದು ಅಭಿಪ್ರಾಯಪಡುವನು. ನಾಟಕದ ವೇಳೆಯ ಪ್ರಣಯ, ಹಾಸ್ಯ, ಭಯಾನಕ, ಕರುಣರಸಗಳನ್ನು ನಾವು ಊಟಕ್ಕೆ ಕುಳಿತಾಗ ಸಿಹಿ ಉಪ್ಪು ಖಾರ ಹುಳಿಗಳಂಥ ರುಚಿಗಳೊಂದಿಗೆ ಇಡೀ ಊಟದ ಬಗ್ಗೆ ಸಮಾಧಾನ ತಾಳುವ ಹಾಗೆ—ಪ್ರೇಕ್ಷಕನಿಗೆ ಎಲ್ಲವುಗಳ ಒಟ್ಟು ಪರಿಣಾಮವಾಗಿ ಅವಿಸ್ಮರಣೀಯ ಅನುಭವವಾಗುವುದೇ 'ರಸ'ವೆಂದೂ 'ಸ್ಥಾಯೀಭಾವ'ವೆಂದೂ ಕರೆಯುವುದು.

10ನೆಯ ಶತಮಾನದ ಅನಂತರ ನಾಟಕಗಳೇ ಇರಲಿಲ್ಲ. ಯಾಕೆಂದರೆ ಸಂಸ್ಕೃತ ಭಾಷೆ ಸಾಮಾನ್ಯನಿಗೆ ಎಟುಕದಂತಾಗಿತ್ತು. ಪ್ರಾಕೃತಗಳು ಪ್ರಾದೇಶಿಕ ಆಡುಭಾಷೆಗಳಾಗಿದ್ದವಾದರೂ ಅವಕ್ಕೆ ಅಖಿಲ ಭಾರತ ಮಟ್ಟದ ಸ್ಥಾನ ಸಿಗುತ್ತಿರಲಿಲ್ಲ. ಅಂದರೆ ಲಿಖಿತ ನಾಟಕಗಳಿರಲಿಲ್ಲವೆಂದ ಮಾತ್ರಕ್ಕೆ ರಂಗಭೂಮಿಯೇ ಇರಲಿಲ್ಲವೆಂದೇನಲ್ಲ. ಅಲ್ಲಲ್ಲಿ ಹುಟ್ಟಿದ ಜಾನಪದ ರಂಗಭೂಮಿಯ ಹುಟ್ಟನ್ನೂ, ಹಳ್ಳಿಗಳಲ್ಲಿ ಬ್ರಾಹ್ಮಣ ಗುರು ಆಸಕ್ತರನ್ನು ಒಟ್ಟುಗೂಡಿಸಿ ಪುರಾಣಕಥೆಗಳನ್ನೂ ಸಂಗೀತ ಸಂಭಾಷಣೆಗಳಲ್ಲಿ ಸರಳ ನೃತ್ಯಗಳೊಂದಿಗೆ ಕೂಡಿದ ನಾಟಕ ಕಲಿಸುತ್ತಿದ್ದನು. ಇಂಥವುಗಳು 'ಜಾತ್ರಾ', 'ಭಾಮಾಕಲಾಪ', 'ಕೃಷ್ಣಪಾರಿಜಾತ', 'ಬಯಲಾಟ' ಮತ್ತು 'ಯಕ್ಷಗಾನ'ಗಳೆಂದು ಬೇರೆ ಬೇರೆ ಹೆಸರು ಪಡೆದವು. ಇಂದಿಗೂ ಜೀವಂತವಾಗಿ ಉಳಿದಿವೆ.

ನಗರ ಪ್ರದೇಶಗಳಲ್ಲಿ ಆಡುವ ನಾಟಕಗಳು ಯೂರೋಪಿಯನ್ ರಂಗಭೂಮಿಯಂಥ ಅನುಕರಣೆ ಮಾಡಿದರೂ ನಾಟ್ಯಶಾಸ್ತ್ರದ 'ವಿದೂಷಕ' ಮತ್ತು

'ಸೂತ್ರಧಾರ' ಪರಂಪರೆಗಳನ್ನು ಉಳಿಸಿಕೊಂಡು ಬಂದಿವೆ. ಕಥೆಗಳು ಪೌರಾಣಿಕ ವಾಗಿದ್ದರೂ ನೃತ್ಯ, ಸಂಗೀತ, ಪ್ರೋಷಾಕು ಇತ್ಯಾದಿ ಬಳಸಿದಾಗಲೂ ಪ್ರೇಕ್ಷಕನು ಆಕ್ಷೇಪಿಸಲಿಲ್ಲ.

ಭಾರತವು ಸ್ವತಂತ್ರವಾಗುವ ಜೊತ್ತಿಗೆ ಹವ್ಯಾಸಿ ರಂಗಭೂಮಿಯು ಹುಟ್ಟಿ ತೆಂದೂ ಅದರಲ್ಲಿ ಆಂಗ್ಲ ಶಿಕ್ಷಣ ಪಡೆದ ಜನ ಪ್ರತ್ತಿ ನಾಟಕಗಳನ್ನು ಮೆಚ್ಚದೇ ಶೇಕ್ಸ್ಪಿಯರನ ನಾಟಕಗಳನ್ನೂ ಅವುಗಳ ಅನುವಾದಗಳನ್ನೂ ಅಭಿನಯಿಸುತ್ತ ಜನಪದ ರಂಗಭೂಮಿ ಅಥವಾ ಜನಪ್ರಿಯ ರಂಗಭೂಮಿಯಿಂದ ದೂರ ಉಳಿಯಿ ತಲ್ಲದೇ ಇಂದಿಗೂ ಹಾಗೇ ಇಳಿದಿದೆ.

ರಂಗಕಲೆಯಲ್ಲಿ ನಿಜವಾಗಿ ಆಸಕ್ತರಾದ ನಾವೆಲ್ಲರೂ ರಂಗಭೂಮಿಯ ವಿಕಾಸಕ್ಕೆ ನೆರವಾಗುತ್ತ ಸಾಮಾಜಿಕ, ಔದ್ಯೋಗಿಕ, ಆರ್ಥಿಕ ಮತ್ತು ವೈಚಾರಿಕ ಪ್ರಗತಿಗೆ ಪೂರಕವಾಗುವಂತೆ ದೀರ್ಘಾವಧಿಯ ಯೋಜನೆಗಳನ್ನು ಹಮ್ಮಿಕೊಂಡರೆ ದೇಶೀ ರಂಗಭೂಮಿಯನ್ನು ಗುರುತಿಸುವಲ್ಲಿ ಸಹಾಯಕವಾಗಬಹುದು.

---

# ಸಂಶೋಧನ ಕ್ಷೇತ್ರಕ್ಕೆ ಮುಳಿಯ ತಿಮ್ಮಪ್ಪಯ್ಯನವರ ಕೊಡುಗೆ

—ಟಿ. ಕೇಶವ ಭಟ್ಟ

ಕನ್ನಡ ತಾಯ ಊಳಿಗವನ್ನು ಜೀವನವ್ರತವೆಂಬಂತೆ ಬದುಕಿನುದ್ದಕ್ಕೂ ನಡೆಸಿ ಕೀರ್ತಿಶಾಯಿಯಾದವರು ಮುಳಿಯ ತಿಮ್ಮಪ್ಪಯ್ಯನವರು. ಸಾಹಿತ್ಯ ಮತ್ತು ಸಾಹಿತ್ಯ ಶಾಸ್ತ್ರಗಳ ಆಳವಾದ ಅಧ್ಯಯನ, ಹೈಸ್ಕೂಲು ಕಾಲೇಜುಗಳಲ್ಲಿ ಪಾಠ-ಬೋಧನೆ, ಆಗಾಗ ವಿಶೇಷೋಪನ್ಯಾಸಗಳು, ಲೇಖನಗಳ ಹಾಗೂ ಅನೇಕ ಕೃತಿಗಳ ರಚನೆ—ಅವರು ಮಾಡಿರುವ ಕನ್ನಡದ ಸೇವೆಯ ರೂಪಗಳು. ಬದುಕಿದುದು 3. ಮಾರ್ಚ್ 1888 ರಿಂದ 16–1–1950 ರ ವರೆಗೆ ಅರುವತ್ತೆರಡು ವರ್ಷ. ಸುಮಾರು ಇಪ್ಪತ್ತು ಅವರ ಪ್ರಕಟಿತ ಕೃತಿಗಳು; ಚಿರಕಾಲ ಉಳಿಯುವಂಥವು. ಅವುಗಳಲ್ಲಿ ಸಂಶೋಧನ ಮೌಲ್ಯವುಳ್ಳವೇ ಹೆಚ್ಚು. ಅವರ ಜನ್ಮಶತಮಾನದ ವರ್ಷವಿದು. ಈ ಸಂದರ್ಭದಲ್ಲಿ ಅವರನ್ನು ಹಾಗೂ ಅವರು ಮಾಡಿರುವ ಕನ್ನಡದ ಸೇವೆಯನ್ನು ನೆನಸಿಕೊಳ್ಳುವುದು, ಅವುಗಳಿಂದ ಹೆಚ್ಚಿನ ಅರಿವನ್ನು ಮತ್ತು ಕಾರ್ಯ-ಪ್ರೇರಣೆಯನ್ನು ಪಡೆದುಕೊಳ್ಳುವುದು ಕನ್ನಡಿಗರೆಲ್ಲರ ಕರ್ತವ್ಯ. ಕನ್ನಡ ಸಾಹಿತ್ಯ ಸೇವೆಗಾಗಿಯೇ ಜನ್ಮತಾಳಿದ ಬಿ.ಎಂ.ಶ್ರೀ. ಪ್ರತಿಷ್ಠಾನ ಈ ಉಪನ್ಯಾಸವನ್ನು ನಡೆಸು ವುದರಲ್ಲಿ ಅದನ್ನು ನನ್ನಿಂದಲೇ ಮಾಡಿಸುವುದರಲ್ಲಿ ಔಚಿತ್ಯವೂ ಉಂಟು.

ಹಿಂದೆ, ಕಾರವಾರದಲ್ಲಿ 1931 ರಲ್ಲಿ ನಡೆದ ಸಾಹಿತ್ಯ ಪರಿಷತ್ತಿನ 17ನೆಯ ಸಮ್ಮೇಳನಕ್ಕೆ ತಿಮ್ಮಪ್ಪಯ್ಯನವರನ್ನು ಅಧ್ಯಕ್ಷತೆಗೆ ಆರಿಸಲಾಗಿತ್ತು. ಅವರ ಅಧ್ಯಕ್ಷ ಭಾಷಣ ಕೇಳಿದ ಬಿ.ಎಂ.ಶ್ರೀ.ಯವರು ತುಂಬ ಮೆಚ್ಚಿದವರಾಗಿ ತಿಮ್ಮಪ್ಪಯ್ಯನವ ರೊಡನೆ—"ನಿಮ್ಮಂತಹ ವಿದ್ವಾಂಸರನ್ನು ನನಗೆ ನಿಮ್ಮೂರ ಕೆಲ ವಿದ್ವಾಂಸರೇ ಪರಿಚಯ ಮಾಡಿಸಲಿಲ್ಲ" ಎಂದರಂತೆ.[1] ಹೀಗೆ ಬಿ.ಎಂ.ಶ್ರೀ.ಯವರೇ ಮೆಚ್ಚಿದ್ದ ಘನ ವಿದ್ವಾಂಸರು ಅವರು. ನಾನಾದರೋ ಅವರ ಸಮೀಪದ ಊರವನಾಗಿದ್ದು, ಅವರೊಡನೆ ನೇರ ಸಂಪರ್ಕದ ಅನುಭವಲಾಭ ಪಡೆದವನು. ಅವರ ಹಲವು ಉಪನ್ಯಾಸಗಳನ್ನು ಕೇಳಿದವನು; ಅವರ ಕೃತಿಗಳನ್ನು ಓದಿದವನು, ಮುಖ್ಯವಾದು ವನ್ನು ಅಭ್ಯಾಸ ಮಾಡಿದವನು ಕೂಡ. ಇಂದಿಗೆ 20 ವರ್ಷಗಳ ಹಿಂದೆ (26–1–1969ರಲ್ಲಿ) ಪುಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘದಲ್ಲಿ ಅವರ ಬದುಕು–ಬರಹಗಳನ್ನು ಕುರಿತು ನನ್ನಿಂದ ಉಪನ್ಯಾಸವಾದುದುಂಟು. 28–8–1983 ರಲ್ಲಿ

---

1 ಕನ್ನಡ ಸಾಹಿತ್ಯ ಮತ್ತು ಇತರ ಉಪನ್ಯಾಸಗಳು, 1965, ಪುಟ 7.

ದಕ್ಷಿಣ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಂದರ್ಭ ಮಂಗಳೂರಿನ ಪುರಭವನ ದಲ್ಲಿ 'ಕವಿರಾಜಮಾರ್ಗ ವಿವೇಕ' ಗ್ರಂಥವನ್ನು ಕುರಿತು ಉಪನ್ಯಾಸ ಮಾಡಿದ್ದೂ ಉಂಟು. ಅವರ ನಾಡೋಜ ಪಂಪ ಮತ್ತು ಪಂಪಭಾರತ ನನಗೆ ಎಂ.ಎ. ಪರೀಕ್ಷೆಗೆ ವಿಶೇಷಾಧ್ಯಯನದ ಪಠ್ಯಗಳೂ ಆಗಿದ್ದವು. ಇವೆರಡೂ ಇತ್ತೀಚೆ ಪುನರ್ಮುದ್ರಣ ವಾಗುವ ಸಂದರ್ಭದಲ್ಲಿ ತಿಮ್ಮಪ್ಪಯ್ಯನವರ ಮಗ ಎಂ. ಕೇಶವ ಭಟ್ಟರು ನನ್ನಿಂದ ಗ್ರಂಥಪರಿಷ್ಕಾರದ ನೆರವನ್ನು ಸಾಕಷ್ಟು ಪಡೆದಿರುವುದೂ ಉಂಟು. ಹೀಗೆ ಇಂದಿನ ಉಪನ್ಯಾಸ ವಿಷಯ ನನಗೆ ಬಲು ಹತ್ತಿರ ಹಾಗೂ ಆತ್ಮೀಯ. ಆದುದರಿಂದ ಸಂತೋಷ ಅಭಿಮಾನಗಳ ಸಂಗತಿ.

ತಿಮ್ಮಪ್ಪಯ್ಯನವರ ಹೆಸರಿಗೆ ವಿಶೇಷಣದಂತೆ ಕಂಡುಬರುವ 'ಮುಳಿಯ' ಎಂಬ ಶಬ್ದವೂ ಒಂದು ಸಂಶೋಧನಾಂಶವೇ ಆಗಿದೆ. ವಾಸ್ತವವಾಗಿ ಅದು ಅವರ ಜನ್ಮಸ್ಥಳ; ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದಿಂದ ಸುಮಾರು ಐದು ಮೈಲು ದೂರ ದಲ್ಲಿರುವ ಒಂದು ಊರು ಮುಳಿಯ. ಈ ಶಬ್ದಾರ್ಥದ ವಿನೋದ ಚರ್ಚೆಯ ಒಂದು ಘಟನೆ ಹೀಗಿದೆ—ಒಮ್ಮೆ ಪಂಜೆ ಮಂಗೇಶರಾಯರೂ ಡಿ.ವಿ.ಜಿ.ಯವರೂ ಮುಳಿಯ ತಿಮ್ಮಪ್ಪಯ್ಯನವರ ಮನೆಗೆ (ಮಂಗಳೂರಿನಲ್ಲಿ ವಾಸವಿದ್ದ ಮನೆಗೆ) ಹೋಗಿದ್ದರಂತೆ. ಮಂಗೇಶರಾಯರು ಆ ಸಂದರ್ಭದಲ್ಲಿ ಅವರೊಡನೆ—"**ಮುಳಿಯ ತಿಮ್ಮಪ್ಪಯ್ಯ, ಮುಳಿಯದ ತಿಮ್ಮಪ್ಪಯ್ಯ, ಮುಳಿಯೆ ತಿಮ್ಮಪ್ಪಯ್ಯ** — ಈ ಮೂರರಲ್ಲಿ ನಿಮಗೆ ಒಪ್ಪಿತ ಯಾವುದು?" ಎಂದು ಕೇಳಿದರಂತೆ. ಆ ಸಂದರ್ಭದ ವ್ಯಾಖ್ಯಾನ ಹೀಗಿತ್ತು:—'ಮುಳಿಯ' ಎಂದರೆ ಕೋಪವನ್ನರಿಯದ, ಸ್ವಭಾವ ದಲ್ಲಿಯೇ ಕೋಪವಿಲ್ಲದ–ಎಂದು. 'ಮುಳಿಯದ' ಎಂದರೆ–ಸ್ವಭಾವದಲ್ಲಿ ಕೋಪ ಇದ್ದರೂ ಅದನ್ನು ಮೇಲಕ್ಕೆ ಬರಗೊಡಿಸದ–ಎಂದು. 'ಮುಳಿಯೆ' ಎಂದರೆ ಕೋಪಿಸಿದ್ದೇ ಆದರೆ ತಿಮ್ಮಪ್ಪಯ್ಯನವರ ಕೋಪವನ್ನು ಮೀರಿಸುವ ಕೋಪ ಲೋಕ ದಲ್ಲೇ ಇಲ್ಲ–ಎಂದು. ತಿಮ್ಮಪ್ಪಯ್ಯನವರು ವಿನಯಪರರು, ಸ್ನೇಹಭಾವದವರು, ಸೌಮ್ಯಗುಣದವರು—ಅವರು ನಗುತ್ತ 'ನನ್ನ ವಿಷಯ ನಾನೇನು ಬಲ್ಲೆ? ನೀವು ಹೇಗೆಂದರೆ ಹಾಗೆ' ಎಂದು ಉತ್ತರ ಕೊಟ್ಟು ಮುಗಿಸಿದರು.[2]

ಸಂಪತ್ತಿಗೂ ಠೀವಿಗೂ ಧಾರಾಳತೆಗೂ ಹೆಸರಾಗಿ, ವಿಟ್ಲ ಬಲ್ಲಾಳ ಅರಸರಿಗೆ ಸಮಾನವೆಂಬಂತೆ ಮೆರೆದ ಮುಳಿಯ ಮನೆತನದಲ್ಲಿ ಅಣ್ಣಯ್ಯ ಎಂಬ ಅಡ್ಡಹೆಸರಿಂದ ಕೂಡಿದ ಕೇಶವ ಭಟ್ಟರಿಗೆ ಮೂಕಾಂಬಿಕೆಯಲ್ಲಿ ಜನಿಸಿದವರು ತಿಮ್ಮಪ್ಪಯ್ಯ. ಠೀವಿ ದರ್ಬಾರುಗಳಿಂದಾಗಿ ಇವರ ಮನೆತನದಲ್ಲಿ ಬಡತನ ಒಳನುಗ್ಗಿದ್ದಿತು; ದೆಸೆಗೆಡಿ ಸಿದ್ದಿತು. ಇದರಿಂದ ಆಸ್ತಿಪಾಸ್ತಿಗಳು ತೊಲಗಿದ್ದವು. ತಿಮ್ಮಪ್ಪಯ್ಯನವರು ಶಾಲೆ

2 ಈ ಸಂಗತಿ 'ಪಂಜೆಯವರ ನೆನಪಿಗಾಗಿ' ಎಂಬ ಗ್ರಂಥದಲ್ಲಿ ಡಿ.ವಿ.ಜಿ.ಯವರು ಬರೆದ ಲೇಖನದಲ್ಲಿ ಬಂದಿದೆ.

ಯಲ್ಲಿ ಕಲಿತುದು 4ನೆಯ ತರಗತಿ ಮಾತ್ರ. ಮುಂದೆ ಊರು ಬಿಟ್ಟು ತಿರುವಾಂಕೂರಿನಲ್ಲಿ ಮತ್ತೆ ಮೈಸೂರಿನಲ್ಲಿ ಸಂಸ್ಕೃತಾಧ್ಯಯನ ಮಾಡಿದರು, ಸಂಗೀತವನ್ನು ಕಲಿತರು. 1926ರಲ್ಲಿ ವಿದ್ವಾನ್ ಪರೀಕ್ಷೆಗೂ ಕುಳಿತಿದ್ದರು. 1910ರಲ್ಲಿ ಮಂಗಳೂರಿನಲ್ಲಿ ಕೆನರಾ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ನೇಮಕ. 1918ರಲ್ಲಿ ಎಲೋಸಿಯುಸ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ 1948ರಲ್ಲಿ ನಿವೃತ್ತಿ–ಇವು ಅವರ ಔದ್ಯೋಗಿಕ ಜೀವನದ ಮೈಲಿಗಲ್ಲುಗಳು. 1927ರಲ್ಲಿ 13ನೇ ಸಾಹಿತ್ಯ ಸಮ್ಮೇಳನ ಮಂಗಳೂರಿನಲ್ಲಿ ಜರಗಿದಾಗ 'ಅಂಡಯ್ಯನೂ ಕನ್ನಡವೆನಿಪ್ಪಾ ನಾಡೂ' ಎಂಬ ಸಂಶೋಧನ ಪ್ರಬಂಧವನ್ನು ಮಂಡಿಸಿದ್ದರು. 1931ರಲ್ಲಿ ಕಾರವಾರದ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದರು. 1933ನೇ ಜನವರಿಯ ಜಯ ಕರ್ನಾಟಕ ಪತ್ರಿಕೆಯಲ್ಲಿ 'ಮುದ್ದಣನ ಜಾಣ್ಮೆ' ಎಂಬ ಸಂಶೋಧನ ಲೇಖನವನ್ನು ಬರೆದು ಪ್ರಕಟಿಸಿದ್ದರು. 1941ರಲ್ಲಿ ಪಂಪನ ಸಹಸ್ರಸಾಂವತ್ಸರಿಕೋತ್ಸವ ಲಕ್ಷ್ಮೇಶ್ವರದಲ್ಲಿ ನಡೆದಾಗ ತಿಮ್ಮಪ್ಪಯ್ಯನವರೇ ಅಧ್ಯಕ್ಷರಾಗಿದ್ದರು. ಈ ಎಲ್ಲ ಸಂದರ್ಭಗಳ ಅವರ ಉಪನ್ಯಾಸಗಳು–ಲೇಖನಗಳು ಸಂಶೋಧನೆಯ ಹೊಸ ಬೆಳಕನ್ನು ಬೀರುವಂಥವಾಗಿದೆ. ಅವೆಲ್ಲವೂ ಪುಸ್ತಕರೂಪದಲ್ಲಿ ಹೊರಬಂದಿವೆ. 'ಕೋಗಿಲೆ' ಎಂಬ ಪತ್ರಿಕೆಯನ್ನೂ ನಡೆಸಿದ್ದಾರೆ.

ಕನ್ನಡದಲ್ಲಿ ವಿಶೇಷ ವೈವಿಧ್ಯಮಯವಾದ ಸಾಹಿತ್ಯರಚನೆ ಮಾಡಿರುವ ಅವರ ನೆನಪಿಗಾಗಿ 'ಶ್ರದ್ಧಾಂಜಲಿ' ಎಂಬೊಂದು ಸ್ಮಾರಕ ಗ್ರಂಥ 1956ರಲ್ಲಿ ಹೊರಬಂದಿದೆ. ಅವರ ರಚನೆಗಳಲ್ಲಿ ಕೆಲವು ಆಯಾ ಸಾಹಿತ್ಯವರ್ಗದಲ್ಲಿ ಪ್ರಥಮ ಸ್ಥಾನವನ್ನೆ ಪಡೆಯುತ್ತವೆ. ಒಂದೆರಡು ದ್ವಿತೀಯವಾಗಿ ನಿಲ್ಲುತ್ತವೆ. ಅವರ ಪ್ರಕಟಿತ ಗ್ರಂಥಗಳ ವಿವರವಿದು—

| ಹೆಸರು | ಪ್ರಕಟನ ವರ್ಷ | ವಿವರ |
|---|---|---|
| 1. ಚಂದ್ರಾವಳೀ ವಿಲಾಸ | 1913 | ಹಳಗನ್ನಡ ಗದ್ಯಕಾವ್ಯ |
| 2. ಸೊಬಗಿನ ಬಳ್ಳಿ | 1917 | ಅಚ್ಚಗನ್ನಡ ಪದ್ಯಕಾವ್ಯ |
| 3. ನಡತೆಯ ನಾಡು | 1917 | ಅಚ್ಚಗನ್ನಡದ ಗದ್ಯಕೃತಿ (ಕರ್ಣನ ಕಥೆ) |
| 4. ಬಡಹುಡುಗಿ | 1918 | ಕಥನ (ಖಂಡ) ಕಾವ್ಯ |
| 5. ಹಗಲಿರುಳು | 1918 | ತಾತ್ತ್ವಿಕ ನಾಟಕ (5 ಅಂಕಗಳುಳ್ಳದು) |
| 6. ಪಶ್ಚಾತ್ತಾಪ | 1934 | ಸಾಮಾಜಿಕ ಕಾದಂಬರಿ |
| 7. ನಾಡೋಜ ಪಂಪ | 1938, 1977 | ವಿಮರ್ಶೆ–ಸಂಶೋಧನಗ್ರಂಥ |
| 8. ಆದಿಪುರಾಣ ಸಂಗ್ರಹ | 1938 | ಕಾವ್ಯಕಥಾ ಸಂಗ್ರಹ (ಗದ್ಯ) |

| | | | |
|---|---|---|---|
| 9. | ನವನೀತ ರಾಮಾಯಣ, ಭಾಂಡ I | 1940 | ಝಂಪೆ ರಗಳೆಯ ಕಾವ್ಯ |
| 10. | ಸಮಸ್ತ ಭಾರತ ಸಾರ | 1941 | ವಿಕ್ರಮಾರ್ಜುನ ವಿಜಯ ಕಾವ್ಯದ ಸಂಗ್ರಹ ಕಥನ |
| 11. | ತ್ರಿಪುರ ದಾಹ | 1941 | ಶಿವರಾಮಾಯಣನ ತ್ರಿಪುರದಹನದ ಗದ್ಯಾನುವಾದ |
| 12. | ಶಿವರಾಮ ಚರಿತೆ (ಸತ್ತಮೆಟ್ಟುವ ಹಾಡು) | 1943 | ಜಾನಪದ ಗೀತ |
| 13. | ಪಾರ್ತಿಸುಬ್ಬ | 1945 | ಕವಿ-ಕೃತಿ ವಿಮರ್ಶೆ–ಸಂಶೋಧನೆ |
| 14. | ವೀರಬಂಕೆಯ | 1948 | ನೃಪತುಂಗನ ಕಾಲದ ಐತಿಹಾಸಿಕ ಕಾದಂಬರಿ |
| 15. | ಕವಿರಾಜಮಾರ್ಗ ವಿವೇಕ, ಭಾಗ I | 1949 | ವಿಮರ್ಶೆ ಸಂಶೋಧನೆ |
| 16. | ಕನ್ನಡ ಸಾಹಿತ್ಯ ಮತ್ತು ಇತರ ಉಪನ್ಯಾಸಗಳು | 1950, 1965 | ಉಪನ್ಯಾಸ ಲೇಖನ ಸಂಚಯ |
| 17. | ಕನ್ನಡ ನಾಡೂ ದೇಸಿ ಸಾಹಿತ್ಯವೂ | 1954 | ಮೂರು ಉಪನ್ಯಾಸಗಳ ಸಂಕಲನ |
| 18. | ಕವಿರಾಜಮಾರ್ಗ ವಿವೇಕ (ಸಮಗ್ರ) | 1973 | ವಿಮರ್ಶೆ–ಸಂಶೋಧನೆ |
| 19. | ಸಂಸ್ಕೃತಿ | 1981 | ಪ್ರಬಂಧ |
| 20. | ಸೂರ್ಯಕಾಂತಿ ಕಲ್ಯಾಣ, ಪ್ರೇಮಪಾಶಿ, ರಾವುತ ರಂಗಪ್ಪ | | ಅಪ್ರಕಟಿತ |

ಇವುಗಳಲ್ಲಿ ಚಂಪ್ರಾವಳೀ ವಿಲಾಸ ಮುದ್ರಣನ ಶ್ರೀರಾಮಾಶ್ವಮೇಧದ ರಚನೆಯನ್ನು ಹೋಲುವ ಹಳಗನ್ನಡ ಗದ್ಯ ಕೃತಿ. "ಓಹೋ ತಣ್ಗಾಳಿಯ ಪೆಂಪೆ! ಅದೋ ವೇಣುವಿನ ಮಧುರ ಸ್ವರದಿಂ ಓರೋಳ್ಮಿ ತಿರುಗುತ್ತುಂ, ದಾಕ್ಷಿಣ್ಯಯುಕ್ತ ಪರಿಮಳಮಂ ಬೀರುತ್ತುಂ ಮೆಲ್ಲನೆ ಸಂಚರಿಸುಗುಂ"—ಹೀಗೆ ಇದರ ಪ್ರಾರಂಭವಿದೆ. ಸೊಬಗಿನ ಬಳ್ಳಿ ವಿಶೇಷ ಉಲ್ಲೇಖನೀಯ. ಇದು ಆಂಡಯ್ಯನ 'ಕಬ್ಬಿಗರ ಕಾವ'ದ ಹಾಗೆಯೇ ಅಚ್ಚಗನ್ನಡದಿಂದಲೇ (ಸಂಸ್ಕೃತ ಶಬ್ದಗಳನ್ನು ಉಪಯೋಗಿಸದೆಯೇ) ರಚಿತವಾಗಿದೆ. ಇದರಲ್ಲಿ ಎಂಟು ಮುಗುಳು (ಸಂಧಿ) ಗಳಿವೆ. ಚೌಪದಿ, ಶರಪಟ್ಪದಿ, ಕುಸುಮ ಪಟ್ಪದಿ, ಸಾಂಗತ್ಯ, ಲಲಿತ ರಗಳೆ, ಮಂದಾನಿಲ ರಗಳೆಗಳನ್ನು ಒಂದೊಂದನ್ನು ಸಂಧಿಗಳಿಗೆ ಬಳಸಲಾಗಿದೆ.

ನವನೀತ ರಾಮಾಯಣದಲ್ಲಿ ಕಥಾವಸ್ತು ರಾಮಾಯಣವೇ ಆದರೂ ಛಂದೋರೂಪ ವಸ್ತು-ಪಾತ್ರಗಳ ವಿನ್ಯಾಸ ಹೊಸತರವಾಗಿದೆ. ಇನ್ನೀಗ

ಸಂಶೋಧನಮಹತ್ವವುಳ್ಳ ಅವರ ರಚನೆಗಳ ಕಡೆಗೆ ಲಕ್ಷ್ಯವಿಡಲಾಗುವುದು, ಅದೇ ಈ ಉಪನ್ಯಾಸದ ಮುಖ್ಯವಿಷಯ.

ಮುಳಿಯ ತಿಮ್ಮಪ್ಪಯ್ಯನವರ ವಿಶೇಷ ಲೇಖನಗಳು ಮತ್ತು ಉಪನ್ಯಾಸಗಳು ಅವರು ಓದಿ ಗಟ್ಟಿಮಾಡಿಕೊಂಡ ಕಚ್ಚಾವಸ್ತುಗಳಲ್ಲ; ಇತರರ ಪ್ರತಿಧ್ವನಿಗಳಲ್ಲ, ಸ್ವಾರ್ಜಿತ. ಸ್ವೋಪಜ್ಞ ಜ್ಞಾನ ಸುವರ್ಣದ ಕಣಗಳನ್ನು ಸ್ವಪ್ರತಿಭೆಯ ಮೂಸೆಯಲ್ಲಿರಗಿಸಿ ಕರಗಿಸಿ. ಅವಕ್ಕೆ ಚಿಂತನೆಯ ಒಪ್ಪವನ್ನಿತ್ತು ತೋರ್ಪಡಿಸುವ ವಾಗಾಭರಣಗಳು. ವಿದ್ಯೆಯಿಂದ ಬಂದ ವಿನಯ ಅವರ ಎಲ್ಲ ಉಪನ್ಯಾಸಗಳಲ್ಲಿಯೂ ಬರೆವಣಿಗೆಗಳಲ್ಲಿಯೂ ಎದ್ದುಕಾಣುತ್ತದೆ; ಸಂಸ್ಕೃತಿ ಗೋಚರಿಸುತ್ತದೆ. ನಿರೂಪಣೆಯಲ್ಲಿ ಪ್ರತಿಮೆಗಳು, ದೃಷ್ಟಾಂತಗಳು, ರೂಪಕಗಳು ಕಣ್ಣಿಗೆ ಕಟ್ಟುತ್ತವೆ. ಅವರು ಮಾಡಿರುವ ಸಮ್ಮೇಳನಾಧ್ಯಕ್ಷ ಭಾಷಣವೇ ಇದಕ್ಕೆ ಉದಾಹರಣೆಯಾಗಬಲ್ಲುದು.

ಅವರು ಪಂಪನ ಮಾರ್ಗದ್ವಯ ಪರಿಣತಿಯನ್ನು ಇದರಲ್ಲಿ ಸೊಗಸಾಗಿ ವಿವರಿಸಿದ್ದಾರೆ. ಉತ್ತರಮಾರ್ಗಲಕ್ಷಣವಾಗಿರುವ ವಕ್ರೋಕ್ತಿ ಕಿವಿಯ ಮೂಲಕ ಹೇಗೆ ಬೇಗನೆ ಒಳನುಗ್ಗುತ್ತದೆ—ಎಂಬುದಕ್ಕೆ ಪಂಪನದೇ ಉದಾಹರಣೆಯನ್ನು ಅವರು ಹೀಗೆ ನೀಡಿದ್ದಾರೆ—

> **ಕಿವಿಯಿಂ ಬಗೆವುಗುವೊಡೆ ಕೊಂ**
> **ಕುವೆತ್ತ ಪೊಸನುಡಿಯೆ ಪುಗುಗುಮುಳಿದುದು ಸರು ಸೈ**
> **ತವಚರನೆ ಮಾಡಿ ಸರು ಸೈ**
> **ತುಪೋಕುಮೇ ಬಗೆಯ ಬಟ್ಟೆಯಂ ಮುಟ್ಟುಗುಮೇ** (ಆದಿಪು. 1–18)

ಮಾನವನ ಕರ್ಣರಂಧ್ರದ ಒಳಗು ಓರೆಕೋರೆಯಾಗಿರುವುದರಿಂದ ವಕ್ರೋಕ್ತಿ (ಕೊಂಕುನುಡಿ) ಬೇಗ ಒಳನುಗ್ಗುತ್ತದೆ. ಸರುಸೈತಾದ (ನೇರವಾದ) ಮಾತು ಬೇಸರವುಂಟುಮಾಡುವುದಲ್ಲದೆ ಮನಃಪಥವನ್ನು ಮುಟ್ಟಲಾರದು—ಎನ್ನುತ್ತಾನೆ ಕವಿ. ಇದನ್ನವರು ವಿವರಿಸುವ ಬಗೆ ಸೊಗಸಾಗಿದೆ. ಅಂತಹದೇ ಇನ್ನೊಂದು ಸನ್ನಿವೇಶ—ಕೌರವನು ಕಪಟದ್ಯೂತದಲ್ಲಿ ಪಾಂಡವರ ಪಾಲಿನ ರಾಜ್ಯವನ್ನು ತನ್ನಲ್ಲಿ ಒಳಪಡಿಸಿಕೊಂಡ ಮತ್ತಿನಲ್ಲಿ ದಿಕ್ಕುಗಾಣದಿದ್ದನೆಂಬುದನ್ನು ಪಂಪನು ಹೇಳುವ ಬಗೆಯಿದು—

> **ಜೂದಿನ ಗೆಲ್ಲದೊಳಾದೀ**
> **ಮೇದಿನಿಯಂ ಕಂಡು ಕಜ್ಜಮಂ ಕಾಣದೆ ದು**
> **ರ್ಯೋದನನದೇನದೇಂ ಮರು**
> **ಳಾದನೊ ಬಡಿಗಂಡನಿಲ್ಲ ಪಾಲನೆ ಕಂಡಂ** (ವಿ.ವಿ. 7–19)

ಇಲ್ಲಿಯ 'ಬಡಿಗಂಡನಿಲ್ಲ ಪಾಲನೆ ಕಂಡಂ' ಎಂಬುದನ್ನು ತಿಮ್ಮಪ್ಪಯ್ಯನವರು ವಿವರಿಸಬೇಕು, ನಾವು ಕೇಳಬೇಕು; ಅವರ ಮುಖಭಾವವನ್ನು ಕಾಣಬೇಕು! ಬೆಕ್ಕು

ಕದ್ದು ಹಾಲು ಕುಡಿಯುವಾಗ ಕಣ್ಣು ಮುಚ್ಚಿಕೊಳ್ಳುವುದಂತೆ. ಆದಕ್ಕೆ ಕಾಣುವುದು ತಾನು ಕುಡಿಯುವ ಹಾಲು ಮಾತ್ರ. ಮನೆಯೊಡತಿ ಹೊಡೆಯಲೆಂದು ಎತ್ತಿದ ಬಡಿಗೋಲು ಕಾಣಿಸದು. ಹಾಗೆಯೇ ಕೌರವನು ಇಲ್ಲಿ ಹಾಲನೆ (ಪಾಂಡವರದಾಗಿದ್ದ ರಾಜ್ಯದ ಹಾಲು) ಕಂಡನು ; ಮುಂದೆ ಭೀಮನ ಬಡಿ (ಗದೆ) ತನ್ನನ್ನು ಹೊಡೆದುರು-ಳಿಸಲಿದೆ—ಎಂಬುದು ಅವನಿಗೇನು ಗೊತ್ತು !

'ಮುದ್ದಣನ ಜಾಣ್ಮೆ' ಎಂಬ ಲೇಖನದಲ್ಲಿ ತಿಮ್ಮಪ್ಪಯ್ಯನವರು ಶ್ರೀರಾಮಾಶ್ವ ಮೇಧದ ಕಥಾಮುಖದ ಗೂಢಾರ್ಥವನ್ನು ತಿಳಿಸಿದ್ದಾರೆ. ಅಲ್ಲಿ "ಓವೊ ! ಕಾಲ ಪುರುಷಂಗೆ ಗುಣಮಣಮಿಲ್ಲಂ ಗಡ ! ನಿಸ್ತೇಜಂ ಗಡ !" ಎಂದು ಪ್ರಾರಂಭಗೊಂಡಿರುವ ಕಥಾಮುಖದಲ್ಲಿ ತೋರಿಕೆಗೆ ವ್ಯಕ್ತವಾಗಿರುವುದು ಮಳೆಗಾಲದ ವರ್ಣನೆ. ತಿಮ್ಮಪ್ಪಯ್ಯನವರು ತಮ್ಮ ಲೇಖನದ ಮೂಲಕ ಅದಕ್ಕೊಂದು ಹೊಸನೋಟ ತಂದಿದ್ದಾರೆ. ಆದರಲ್ಲಿ ಶ್ರೀರಾಮಾಶ್ವಮೇಧದ ಕಥಾಗರ್ಭ ಅಡಗಿರುವುದನ್ನು ಕಾಣಿ ಸಿದ್ದಾರೆ. ಗಿಳಿಯನ್ನು (ಪಂಡಿತವಕ್ಕಿಯನ್ನು) ಸಂಬೋಧಿಸಿ—' ನೀಂ ಪಂಡಿತ ನಾದೊಡೆ ನೀರ್ಗುತ್ತಕ್ಕೆ ಮರ್ದನುಸಿರ್' ಎಂಬುದನ್ನು ಪ್ರಸ್ತಾವಿಸುತ್ತ 'ಪಾಶ್ಚಾತ್ಯ ವೈದ್ಯದಲ್ಲಿ ಪಾಂತಿ ರೋಗಕ್ಕೆ (ನೀರ್ಗುತ್ತಕ್ಕೆ) ಇನ್ನೂ ಸರಿಯಾದ ಮದ್ದು ತಯಾ-ರಾಗಿಲ್ಲದೆಂಬುದನ್ನು ಅರಿತುಕೊಳ್ಳಬೇಕು—ಎಂದಿದ್ದಾರೆ. ' ಮುದ್ದಣನ ಜಾಣ್ಮೆ' ಎಂಬ ಲೇಖನ ತಿಮ್ಮಪ್ಪಯ್ಯನವರ ಜಾಣ್ಮೆಯಿಂದ ಅರ್ಥವಾಗುವಂತಿದ್ದು ಶ್ರೀರಾಮಾ ಶ್ವಮೇಧ ಕಾವ್ಯಪಾಠಕರಿಗೆ ವಿಶೇಷ ಸಹಾಯಕ ಲೇಖನವಾಗಿದೆ.

**ನಾಡೋಜ ಪಂಪ** (1938, 1977) :

ಪಂಪನ ವ್ಯಕ್ತಿತ್ವವನ್ನು ಹಾಗೂ ಅವನಿಂದ ರಚಿತವಾದ ಆದಿಪುರಾಣ ಮತ್ತು ಸಮಸ್ತ ಭಾರತ ಎಂಬೆರಡು ಲೋಕೋತ್ತರ ಕಾವ್ಯಗಳನ್ನು ಕುರಿತು ನಡೆಸಿದ ಸಮೀಕ್ಷೆಯ ಮೂಲಕ ಆತನು ಹೇಗೆ ನಾಡೋಜ (ನಾಡಿಗೆ ಉಪಾಧ್ಯಾಯ, ರಾಷ್ಟ್ರ ಗುರು) ಎಂಬುದನ್ನು ಈ ಗ್ರಂಥದಲ್ಲಿ ಪ್ರತಿಪಾದಿಸಲಾಗಿದೆ. ಪಂಪನು 'ಬೆಳಗುವೆನಿಲ್ಲಿ ಲೌಕಿಕಮಂ, ಅಲ್ಲಿ ಜಿನಾಗಮಮಂ' ಎಂದು, ವಿಕ್ರಮಾರ್ಜುನ ವಿಜಯವನ್ನು ಆರು ತಿಂಗಳಲ್ಲಿಯೂ ಆದಿಪುರಾಣವನ್ನು ಮೂರು ತಿಂಗಳಲ್ಲಿಯೂ ಬರೆದೆನೆಂದು ಹೇಳಿ ಕೊಂಡಿದ್ದಾನೆ. ಈ ಕಾವ್ಯಗಳು ಸಕಲ ಭೂಮಂಡಲದ ಜನತೆಗೂ ಮಾರ್ಗದರ್ಶಕ ನೀತಿತತ್ತ್ವಗಳ ನಿಧಿಯೆಂಬುದನ್ನು ಲೇಖಕರು ವಿವರಿಸಿದ್ದಾರೆ.

ಈ ಗ್ರಂಥದಲ್ಲಿ ಎರಡು ಭಾಗಗಳಿವೆ. ಪ್ರಥಮ ಭಾಗವು ಪಂಪನ ದೇಶ, ಕಾಲ, ಪೋಷಕರಾಜಪರಂಪರೆ, 'ಪಂಪ' ಶಬ್ದದ ವ್ಯುತ್ಪತ್ತಿ, ವಿಕ್ರಮಾರ್ಜುನ ವಿಜಯ ಹೇಗೆ ಸಮಸ್ತ ಭಾರತವೆನಿಸಿದೆ ?, ಪಂಪನ ಧರ್ಮ, ಮತ್ತು ಕಾವ್ಯಧರ್ಮ, ಪಂಪನ ಮಾರ್ಗ–ದೇಸಿಗಳ ಸ್ವರೂಪ—ಇವನ್ನೆಲ್ಲ ಎಳೆಯೆಳೆಯಾಗಿ ವಿವರಿಸುತ್ತದೆ. 'ಪಂಪ'

ಎಂಬುದು (ಪದ್ಮಪ್ರಭ) ಪದ್ಮಪ—ಎಂಬ ಮೂಲರೂಪದಿಂದ ಬಂದಿರಬೇಕೆಂದು ಅಭಿಪ್ರಾಯಪಡಲಾಗಿದೆ. ಈ ಕಾವ್ಯಕ್ಕೆ 'ಸಮಸ್ತ ಭಾರತ' ಎಂಬ ಹೆಸರೇಕೆ? ಎಂಬುದನ್ನು ಸಮರ್ಪಕವಾಗಿ ಇಲ್ಲಿ ಸಂಶೋಧಿಸಲಾಗಿದೆ. ಸಾಮಾನ್ಯವಾಗಿ ವಿದ್ವಾಂಸರು 'ಸಮಸ್ತ' ಎಂಬುದಕ್ಕೆ ಎಲ್ಲ, ಪೂರ್ಣ—ಎಂದು ಅರ್ಥ ಹೇಳಿ, ಇದರಲ್ಲಿ ಭಾರತದ ಕಥೆಯೆಲ್ಲ ಸೇರಿಕೊಂಡಿದೆ—ಎನ್ನುತ್ತಾರೆ; ಇದು ನಿಜವಲ್ಲ. ಇದರಲ್ಲಿ ಸಂಪೂರ್ಣ ಭಾರತದ ಕಥೆಯಿಲ್ಲ. ಅದಲ್ಲದೆ ಕಥೆಯೂ ಮಾರ್ಪಟ್ಟಿದೆ. ದ್ರೌಪದಿಗೆ ಪಂಚಪತಿತ್ವದ ಭಾವ ಇದರಲ್ಲಿಲ್ಲ. ಕೌರವ ವಧಾನಂತರ, ಇದರಲ್ಲಿ ಅರಿಕೇಸರಿಗೆ ಅಭಿನ್ನನಾದ ಅರ್ಜುನನಿಗೇ ಪಟ್ಟ. ಆದುದರಿಂದ ಇಲ್ಲಿ 'ಸಮಸ್ತ' ಎಂದರೆ 'ತಗುಳ್ಚಿದ' ಅಥವಾ ಸಮಾಸೋಕ್ತಿ ಎಂಬ ಅಲಂಕಾರಗರ್ಭವುಳ್ಳ ಭಾರತವಿದು. ಪ್ರಸ್ತುತ ಅರಿಕೇಸರಿಯ ವಂಶಚರಿತ್ರೆಯಲ್ಲಿ ಅಪ್ರಸ್ತುತವಾಗಿ ಕಿರೀಟಿಯ ಕುಲಚರಿತ್ರೆ ಸ್ಫುರಿಸುವಂತೆ ಹೇಳಿದುದಾಗಿದೆ—ಎಂದು ಲೇಖಕರು ಸ್ಪಷ್ಟಪಡಿಸಿದ್ದಾರೆ. ಚಾಳುಕ್ಯ ವಂಶದ ಎಂಟು ಮಂದಿಗೆ ಸರಿಯಾಗಿ ಸೋಮವಂಶದ ಎಣ್ಬರು ಯಾರೆಂಬುದನ್ನು ಲೇಖಕರು ಹೋಲಿಕೆಯಿಂದ ನಿಗದಿ ಮಾಡಿದ್ದಾರೆ. ಚಾಳುಕ್ಯವಂಶದ ಯುದ್ಧಮಲ್ಲನೇ ಸೋಮವಂಶದ ಸೋಮ; ಒಂದನೆ ಅರಿಕೇಸರಿಯೇ ಭರತ; ನರಸಿಂಹನೇ ಪ್ರತಿಮ; ದುಗ್ಧಮಲ್ಲನೇ ಶಂತನು; ಬದ್ದೆಗ ಭೀಷ್ಮ, ಎರಡನೆ ದುಗ್ಧಮಲ್ಲ ವಿಚಿತ್ರವೀರ್ಯ, ನರಸಿಂಹ–ಜಾಕಬ್ಬೆಯರು ಪಾಂಡು ಕುಂತಿಯರು; ಅರಿಕೇಸರಿ–ರೇವಕನಿರ್ಮಡಿಯೆನಿಸಿದ ಲೋಕಾಂಬಿಕೆ—ಇವರೇ ಅರ್ಜುನ ಸುಭದ್ರೆಯರು—ಹೀಗೆ ಇಲ್ಲಿ ನಿರ್ದೇಶಿಸಲಾಗಿದೆ. ಬದ್ದೆಗನು ಭೀಷ್ಮನನ್ನು ಹೋಲ್ಪುದು ಹೀಗಿದೆ—

ಬಲ್ವರಿಕೆಯೊಳರಿನೃಪರ ಪ
ಡಲ್ವಡೆ ತಳ್ತಿರಿದು ರಣದೊಳಾ ವಿಕ್ರಮಮಂ
ಸೊಲ್ವಿನಮಾವರ್ಜಿಸಿದಂ
ನಾಲ್ಪತ್ತೆರಡಱಿಕೆಗಾಳೆಗಂಗಳೊಳೀತಂ (1-25)

ಬದ್ದೆಗನು ತನ್ನ ಬಲಿಷ್ಠ ಸೇನೆಯ ದಾಳಿಗಳಿಂದ ನಲ್ವತ್ತೆರಡು ಪ್ರಸಿದ್ಧ ಯುದ್ಧಗಳಲ್ಲಿ ಗೆದ್ದವನು. ಅವನಿಗೆ ಅಭಿನ್ನನಾದ ಭೀಷ್ಮನು ಇಪ್ಪತ್ತೊಂದು ಕಾಳಗಗಳಲ್ಲಿ ವಿರೋಧಿ ರಾಜರನ್ನು ನುಗ್ಗರೆದ ಪರಶುರಾಮನನ್ನು ಗದ್ದಿರುತ್ತಾನೆ. ಇದರಿಂದ ಪರಶುರಾಮನಿಗೆ ದ್ವಿಗುಣಿತ ಶೌರ್ಯದ ಭೀಷ್ಮನು ನಲ್ವತ್ತೆರಡು ಅಱಿಕೆಕಾಳೆಗದ ವಿಜಯಿಯಾಗುವನೆಂದು ತಿಮ್ಮಪ್ಪಯ್ಯನವರು ಪ್ರತಿಪಾದಿಸಿದ್ದಾರೆ. ಇದಲ್ಲದೆ ಇನ್ನುಳಿದ ನಾಯಕ ಪ್ರತಿನಾಯಕರು ಇಲ್ಲಿ ಯಾರು, ಅಲ್ಲಿ ಯಾರು ಎಂಬುದನ್ನು ನಿರೂಪಿಸಿ, ವಿಕ್ರಮಾರ್ಜುನ ವಿಜಯ ಕಾವ್ಯ ಸಂಪಾದಕರು ತಮಗೆ ಆಭಾಸವಾಗಿ ಕಾಣುವುದೆಂಬುದನ್ನು ಆಕ್ಷೇಪಿಸಿ, ಕವಿಯ ನಿರೂಪಣೆಯನ್ನು ಸಮರ್ಥವಾಗಿ ಸಮರ್ಥಿಸಿದ್ದಾರೆ.

ವಿಕ್ರಮಾರ್ಜುನ ವಿಜಯದ ಆದಿಯ ಮಂಗಳ ಪದ್ಯ ಸಮಗ್ರ ಕಾವ್ಯದ ಕಥಾ ಗರ್ಭಿತವಾಗಿರುವುದನ್ನು ಮತ್ತು ಪ್ರತಿಯೊಂದು ಆಶ್ವಾಸದ ಪ್ರಾರಂಭ ಪದ್ಯವು ಆಯಾ ಆಶ್ವಾಸ ಕಥಾಸೂಚಿಯಾಗಿರುವುದನ್ನು ವಿಶದಪಡಿಸಲಾಗಿದೆ. ಇಲ್ಲಿ ವಿಶದ ಪಡಿಸಿರುವಂತೆ, ಕಾವ್ಯಧರ್ಮ ಪ್ರಸಾರದ ಮೂಲಕವಾಗಿಯೇ ಸಮಾಜದೊಳಗೆ ಧರ್ಮವು ವಿಸ್ತರಿಸಬೇಕು—ಎಂಬುದನ್ನು ಕನ್ನಡಿಗರಿಗೆ ಬೋಧಿಸಿದವನು ಪಂಪನು. ಪಂಪನ ಕಾವ್ಯಧರ್ಮನಿರೂಪಕ ಪದ್ಯವಿದು—

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್
ಪುಗುವುದು ಪೊಕ್ಕು ಮಾರ್ಗದೊಳೆ ತಳ್ವುದು; ತಳ್ತೊಡೆ ಕಾವ್ಯಬಂಧಮೊ
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಣರ್ಚಿಯಿಂ ಬಳಲ್ದು ತುಂ
ಬಿಗಳೆನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ (1–8)

ಇಲ್ಲಿ ಹೇಳಲಾದ ಕಾವ್ಯಧರ್ಮದ ಅಂಶಗಳಲ್ಲಿ ಒಂದೊಂದೇ ವಿಷಯವನ್ನು ತಿಮ್ಮಪ್ಪಯ್ಯನವರು ಸಮರ್ಥವಾಗಿ ವಿವರಿಸಿದ್ದಾರೆ. ಪಂಪನು ಪ್ರತಿಪಾದಿಸಿರುವ ಧರ್ಮದೇವತೆಯ ದೇಹ ಐದು ಅಂಗಗಳನ್ನುಳ್ಳದು. ಅದನ್ನು ಆದಿಪುರಾಣ ಹೀಗೆ ನಿರೂಪಿಸುತ್ತದೆ—

ಭವವಾರಾಶಿ ನಿಮಗ್ನರಂ ದಯೆ, ದಮಂ, ದಾನಂ, ತಪಂ, ಶೀಲಮೆಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ
ರ್ಯವಸಾನಂಬರಮಾನುಷಂಗಿಕ ಫಲಂ ಭೂಪೇಂದ್ರ ರಾಜೇಂದ್ರ ರಾ
ಜ್ಯವಿಳಾಸಂ ಪೆಱತಲ್ತು ನಂಬು ಖಚರಕ್ಷ್ಮಾಪಾಲ ಚೂಡಾಮಣೀ (ಆದಿಪು. 2–7)

ಈ ಐದು ಲಕ್ಷಣಗಳೇ ಲಾಕ್ಷಣಿಕರು ಬಂಧಗುಣವೆಂದು ಹೇಳಿರುವ ಹತ್ತು ಬಗೆಯು ಮೆಂತಲೂ ತಿಮ್ಮಪ್ಪಯ್ಯನವರು ಸ್ಪಷ್ಟಪಡಿಸಿದ್ದಾರೆ—'ಪಂಪನ ದೇಸಿ' ಎಂಬೋದು ಅಧ್ಯಾಯದಲ್ಲಿ ಪಂಪನು ಪ್ರಯೋಗಿಸಿರುವ ಪದಗಳು, ನುಡಿಗಟ್ಟುಗಳು, ಗಾದೆಗಳು. ಛಂದಸ್ಸು, ಜ್ಯೋತ್ಸ್ನಾವಿಹಾರ, ಬೇಟೆ—ಇವುಗಳಲ್ಲೆಲ್ಲ ಅಡಕವಾದ ದೇಸಿಯನ್ನು ವಿವರಿಸಿದ್ದಾರೆ. ಪರಿಶಿಷ್ಟದಲ್ಲಿ ರಾಜಸೂಯ ಯಾಗಾರಂಭದ ವೇಳೆ ಭೀಮನು 'ಎನ್ನ ನುಡಿ ಟಾಠಡಾಢಣ' ಎಂದುದರ ಅರ್ಥರಹಸ್ಯವೆಂತಹುದೆಂದು ತಿಳಿಸಿದ್ದಾರೆ. **ಭುಜಬಲ ವಾಗ್ಬಲಗಳೆರಡೂ ನನಗಿರುವಾಗ ಯಾಗ ಮಾಡುವುದಕ್ಕೆ ಹಿಂಜರಿಕೆಯೇಕೆ—** ಎಂಬುದಿಲ್ಲಿ ಅರ್ಥವೆಂದು ತಿಳಿಸಲಾಗಿದೆ.

'ನಾಡೋಜ ಪಂಪ'ದಲ್ಲಿ ದ್ವಿತೀಯ ಭಾಗವು ಪಂಪನ ಕಾವ್ಯಗಳ ಶೈಲಿಯನ್ನು ವಿವರಿಸುತ್ತದೆ. ಮಹಾಕಾವ್ಯ ಲಘುಕಾವ್ಯಲಕ್ಷಣಗಳು, ಪಂಪನ ಕಾವ್ಯಧರ್ಮ ಅವನ ಕೃತಿಗಳಲ್ಲಿ ಪ್ರವಹಿಸಿದ ಬಗೆ, ರಸೋತ್ಪತ್ತಿ ಪ್ರಕ್ರಿಯೆ, ಲೌಕಿಕ–ಅಲೌಕಿಕ ರಸೋದ್ಗಮ, ಆದಿಪುರಾಣದ ರಸಪ್ರವಾಹ, ಸಮಸ್ತ ಭಾರತದಲ್ಲಿ ಬರುವ ಎಂಟು ಪಾತ್ರಗಳ ನಿರ್ವಹಣೆಯಿಂದ ಭಾರತವು ಹೇಗೆ ಲೋಕಪೂಜ್ಯವಾಯಿತು ಎಂಬುದನ್ನು ಹೇಳಲಾಗಿದೆ.

**ಕವಿರಾಜಮಾರ್ಗ ವಿವೇಕ (1973)**

ಕವಿರಾಜಮಾರ್ಗವು ಕನ್ನಡದ ಆದ್ಯ ಲಕ್ಷಣಗ್ರಂಥ. 'ಆದ್ಯ' ಎನ್ನುವಾಗ ಮೊದಲಿನದು ಎಂಬುದು ಸ್ಥೂಲಾರ್ಥ. ಅದರಿಂದಲೇ ಮುಂದಿನವೆಲ್ಲ ಹುಟ್ಟಿ ಬೆಳೆದುಬಂದುವು ಎಂಬುದು ಗೂಢಾರ್ಥ ಅಥವಾ ಶೋಧಾರ್ಥ. ಕನ್ನಡದ ಇತರ ಲಾಕ್ಷಣಿಕ ಕೃತಿಗಳು ಈ ಗ್ರಂಥದ ವಿವರಣ ಕಿರಣಗಳು. ಆ ಕಿರಣಗಳ ಬೆಳಕಿನಲ್ಲಿ ಬೆಳೆದ ಸಸ್ಯಫಲಸಮೃದ್ಧಿಯೇ ಮಾರ್ಗಕಾವ್ಯಗಳು—ಎಂದು ತಿಳಿದುಕೊಳ್ಳಬಹುದು. ಇವರಲ್ಲಿ ದೋಷಾದೋಷಾನುವರ್ಣನ ನಿರ್ಣಯ, ಶಬ್ದಾಲಂಕಾರವರ್ಣನ ನಿರ್ಣಯ, ಅರ್ಥಾಲಂಕಾರ ಪ್ರಕರಣ—ಎಂದು ಮೂರು ಪರಿಚ್ಛೇದಗಳಿವೆ. ಇದರಲ್ಲಿ ಕನ್ನಡ ಜನಪದವಿಸ್ತಾರ, ನಾಡವರ ಸಂಸ್ಕೃತಿ–ಉನ್ನತಿ, ಸಾಹಿತ್ಯ ರಚನೆಗೆ ಕನ್ನಡವನ್ನು ಬಳಸುವಲ್ಲಿ ಲಕ್ಷಿಸತಕ್ಕ ಸಂಗತಿ, ವಾಕ್ಪ್ರಯೋಗದಲ್ಲಿ ಸರಿ-ತಪ್ಪುಗಳ ನಿರ್ಣಯ, ಕಾವ್ಯತತ್ತ್ವಗಳಾದ ಗುಣ–ಅಲಂಕಾರಗಳ ಪರಿಜ್ಞಾನ, ದಕ್ಷಿಣ–ಉತ್ತರ ಎಂಬ ಮಾರ್ಗಭೇದ—ಇವು ಪ್ರತಿಪಾದ್ಯಗಳಾಗಿವೆ. ಇವಲ್ಲದೆ, ಕರ್ಣಾಟಕಕ್ಕೆ ಮಾತ್ರ ವಲ್ಲದೆ, ಸಮಗ್ರ ಭಾರತ ರಾಷ್ಟ್ರಕ್ಕೆ ಉಪಾದೇಯವಾಗುವ ಆಳಿಕೆಯ ವ್ಯವಸ್ಥೆ—ಎಂತಹುದು ಎಂಬುದಕ್ಕೆ ಈ ಗ್ರಂಥ ಮಾರ್ಗದರ್ಶಿಯಾಗುತ್ತದೆ—ಎಂಬುದನ್ನು 'ಕವಿರಾಜಮಾರ್ಗ ವಿವೇಕ'ದಲ್ಲಿ ಪ್ರತಿಪಾದಿಸಿರುವುದನ್ನು ಕಾಣುತ್ತೇವೆ. ಆದುದ ರಿಂದ ಇದು ಸಾಹಿತಿಗಳಿಗೆ ಮಾತ್ರವಲ್ಲದೆ, ಸಮಾಜನಿಷ್ಠೆ–ದೇಶನಿಷ್ಠೆಗಳನ್ನು ಬೆಳಸ ಬೇಕೆಂಬುವರಿಗೂ ಕೈಪಿಡಿಯಾಗುತ್ತದೆ.

ಈ ಗ್ರಂಥದಲ್ಲಿ ಎರಡು ಭಾಗಗಳಿವೆ. ಒಟ್ಟು ಅಧ್ಯಾಯ ಹದಿನೇಳು. ಮೊದಲನೆ ಭಾಗದಲ್ಲಿ ಒಂಬತ್ತು ಅಧ್ಯಾಯಗಳು. ಇಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ಐತಿಹಾಸಿಕ ಸಂಗತಿಗಳು, ಕವಿರಾಜಮಾರ್ಗ ಕರ್ತೃವಿಚಾರ, ಆಗಿನ ಕಾಲದ ಕನ್ನಡದ ಸ್ವರೂಪ ಮತ್ತು ಹಿನ್ನೋಟ ಇವು ಅಡಕವಾಗಿವೆ. ಎಂಟು ಅಧ್ಯಾಯಗಳಿಂದ ಕೂಡಿದ ಎರಡನೆಯ ಭಾಗ ವ್ಯಾಖ್ಯಾತ್ಮಕವೂ ಸಂಶೋಧನಾತ್ಮಕವೂ ಆಗಿದೆ. ಇತಿಹಾಸಾಂಶದಲ್ಲಿ ಕೆಲವು ಮುಖ್ಯಸಂಗತಿಗಳಿವು—ರಾಷ್ಟ್ರಕೂಟ ವಂಶದ ಪ್ರಮುಖ ಐವರು ರಾಜರಲ್ಲಿ ಜಗತ್ತುಂಗ ಗೋವಿಂದರಾಜನು ರಾಜನೀತಿನಿಪುಣನಾಗಿದ್ದು ಅಖಂಡ ಕರ್ಣಾಟಕಕ್ಕೆ ಮಾತ್ರವಲ್ಲದೆ, ಅಖಂಡ ಭರತಖಂಡಕ್ಕೆ ಹಾಗೂ ಲಂಕಾರಾಜ್ಯದವರೆಗೆ ಒಕ್ಕೊಡೆಯ ಚಕ್ರವರ್ತಿಯಾಗಿದ್ದನು. ಶಕಪುರುಷ ವಿಕ್ರಮಾದಿತ್ಯ–ಶಾಲಿವಾಹನ ರನ್ನು, ಅಶೋಕಚಕ್ರವರ್ತಿಯನ್ನು ಕೂಡ ಮೀರಿಸಿದ್ದನೆಂಬುದನ್ನು ಲೇಖಕರು ಆಧಾರಪೂರ್ವಕ ಘೋಷಿಸಿದ್ದಾರೆ. ಅವನ ರಾಜಧಾನಿ ಹೇಲಾಪುರ (ವಿಲಾಸನಗರ). ಅದೇ ಅವನ ಮಗ ನೃಪತುಂಗನ ಕಾಲದಲ್ಲಿ ಮಾನ್ಯಖೇಟ (ಮಳಖೇಡ) ವಾಗಿ ಮಾರ್ಪಟ್ಟಿತು. ನೃಪತುಂಗನ ಆಳಿಕೆಯ ಅಧಿಕಾರಮಹತ್ತರರಾಗಿ ರಾಷ್ಟ್ರಪತಿ, ವಿಷಯಪತಿ, ಗ್ರಾಮಕೂಟ, ಯುಕ್ತಕ, ನಿಯುಕ್ತಕ ಎಂಬವರ ವಿಚಾರವನ್ನಿಲ್ಲಿ

ವಿವರಿಸಲಾಗಿದೆ. ಈ ಅಧಿಕಾರಿವರ್ಗವಲ್ಲದೆ, ಹಳ್ಳಿಹಳ್ಳಿಗಳಲ್ಲಿ 'ಮಹಾಜನ' ಎಂಬೊಂದು ಸ್ವತಂತ್ರ ಸಂಸ್ಥೆ ಇತ್ತೆಂದೂ ಅದರಲ್ಲಿ ಜಾತಿಮತ ಭೇದವಿಲ್ಲದೆ ಎಲ್ಲ ವರ್ಗದವರೂ ಸದಸ್ಯರಾಗಿದ್ದಾರೆಂದೂ ತಿಳಿಸಲಾಗಿದೆ. ಆಳುವ ರಾಜನಿಗೂ ಅವನ ಮನೆತನಕ್ಕೂ ಬೋಧಕರಾಗಿ ಕುಲಗುರುಗಳಾಗಿ ಮತ್ತು ದೇವಾಲಯದ ಅಧಿಕಾರಿಗಳಾಗಿ 'ಗೊರವರು' ಇದ್ದರೆಂದೂ ಸ್ಪಷ್ಟಪಡಿಸಲಾಗಿದೆ. 'ಉದಾರಂ' ಎಂದು ನೃಪತುಂಗನ ಬಿರುದು-ಸರ್ವಧರ್ಮ ಸಮಭಾವದ ಸಹಿಷ್ಣುತೆಯ ಪ್ರತೀಕವಾಗಿದ್ದಿತು. ಈ ಗ್ರಂಥದಲ್ಲಿ ಉದಾತ್ತಾಲಂಕಾರಕ್ಕೆ ಕೊಟ್ಟಿರುವ ಉದಾಹರಣ ಪದ್ಯ ಅವನ ಉದಾರನೀತಿಯನ್ನು ಹೀಗೆ ತಿಳಿಸುತ್ತದೆ—

> ಕಸವರಮೆಂಬುದು ನೆಗೆ ಸೈ
> ರಿಸಲಾರ್ಪೊಡೆ ಪರವಿಚಾರಮುಂ ಧರ್ಮಮುಮಂ
> ಕಸಮೇಂ ಕಸವರಮೇನು
> ಬ್ಬಸಮಂ ಬಸಮಲ್ಲದಿರ್ದು ಮಾಡುವರೆಲ್ಲಂ (3–176)

ಇನ್ನೊಬ್ಬರ ವಿಚಾರವನ್ನೂ ಧರ್ಮವನ್ನೂ ಸಹಿಸುವ ಗುಣವೇ ಕಸವರ; ಅಂದರೆ ಸಂಪತ್ತು ಅಥವಾ ಚಿನ್ನ. ಅದಿಲ್ಲವಾದರೆ ಕಸ, ಕಸವರ ಎರಡೂ ಒಂದೇ. ಲೋಕದಲ್ಲಿ ಎಲ್ಲರೂ ತಮ್ಮನ್ನು ತಾವು ವಶದಲ್ಲಿ ಇಟ್ಟುಕೊಳ್ಳಲಾರದೆ ಇತರರಿಗೆ ಉಬ್ಬಸವನ್ನುಂಟುಮಾಡುತ್ತಿದ್ದಾರೆ. ಇದು ಸರಿಯಲ್ಲವೆಂಬುದು ಎಲ್ಲ ಕಾಲಕ್ಕೂ ದೇಶಕ್ಕೂ ತಕ್ಕುದಾದ ರಾಜನೀತಿಯಲ್ಲವೆ?

ಕವಿರಾಜಮಾರ್ಗದ ಕರ್ತೃ ನೃಪತುಂಗನೆಂದೇ ಅನೇಕ ವಿದ್ವಾಂಸರು ಹೇಳುತ್ತ ಬಂದಿದ್ದಾರೆ. ತಿಮ್ಮಪ್ಪಯ್ಯನವರ ಅಭಿಪ್ರಾಯದಂತೆ, ನೃಪತುಂಗನ ಸಭಾಸದನೂ ವಾಗಧಿಪನೂ ಆದ ಶ್ರೀವಿಜಯನೇ ಕರ್ತೃ, ಇವನ ಮೂಲನಾಮ ಜಯ ಅಥವಾ ಜಯಾಳ್ವ.[3]

'ಕವಿರಾಜಮಾರ್ಗ ವಿವೇಕ'ದ ಭಾಗ–ಎರಡು ಭಾಷಾಭ್ಯಾಸಿಗಳಿಗೆ ತುಂಬ ಉಪಯುಕ್ತ. ಇದರಲ್ಲಿ ಮೊದಲು ಶ್ರುತದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿ ಕಷ್ಟ—ಎಂಬ ನಾಲ್ಕು ಕಾವ್ಯದೋಷಗಳನ್ನು ಹೇಳಿದೆ. ಮೂಲ ದೋಷಗಳಾದ ಈ ನಾಲ್ಕು ಹಬ್ಬಿ ಹದಿನಾರಾಗಿದೆ. ದುಷ್ಕರಕಾವ್ಯಗಳಲ್ಲಿ—ಅಂದರೆ ಚಿತ್ರಕವಿತ್ವಗಳಲ್ಲಿ ಶ್ರುತಿಕಷ್ಟವೆಂಬುದು ದೋಷವೆನಿಸದು. 'ಸಮಸಂಸ್ಕೃತದಲ್ಲಿ ಕನ್ನಡವನ್ನು ಬೆರಸಬಹುದು'—ಎಂದು ಕವಿರಾಜಮಾರ್ಗದಲ್ಲಿ ಹೇಳಿದೆ; ಆದರೆ

---

3 ಕವಿರಾಜಮಾರ್ಗದ ಮೂರನೆಯ ಸಂಸ್ಕರಣದ (1968) ಸಂಪಾದಕರಾದ ಶ್ರೀ ಎಂ. ವಿ. ಸೀತಾರಾಮಯ್ಯನವರು ಕವಿರಾಜಮಾರ್ಗದ ಕರ್ತೃ ನೃಪತುಂಗನಲ್ಲ, ಶ್ರೀ ವಿಜಯನೇ ಎಂದು ಮರುಮಾತಿಲ್ಲದಂತೆ ನಿರ್ಧರಿಸಿರುವುದು ಲಕ್ಷ್ಯಾರ್ಹ.

ಸಮಾಸ ಮಾಡಬಹುದೆಂದು ಹೇಳಿಲ್ಲ. ಅರಿಸಮಾಸವನ್ನು ಕವಿರಾಜಮಾರ್ಗ ಮಾನ್ಯ ಮಾಡುವುದಿಲ್ಲ—ಎಂಬುದಾಗಿ ಈ ಗ್ರಂಥದಲ್ಲಿ ಸ್ಪಷ್ಟಪಡಿಸಿದೆ. ಸಂಸ್ಕೃತ ಪದ್ಯರಚನೆಯಲ್ಲಿ ಯತಿಭಂಗವು ದೋಷಕರ; ಆದರೆ, ಕನ್ನಡದಲ್ಲಿ ಖಂಡಪ್ರಾಸದ ಬಳಕೆಯಿರುವುದರಿಂದ ಯತಿಭಂಗ ದೋಷಕರವಲ್ಲ. ಖಂಡಪ್ರಾಸವೆಂದರೆ, ಪಾದದ ದ್ವಿತೀಯಾಕ್ಷರ ಪ್ರಾಸವೆಂದು ಇಲ್ಲಿ ತಿಳಿಸಲಾಗಿದೆ. ಕೃತಿರಚನೆಯಲ್ಲಿ ಮೂಲಭೂತ ವ್ಯಾಕರಣಾಂಶಗಳಾಗಿರುವ ವಿಭಕ್ತಿ, ಕಾರಕ, ಲಿಂಗ, ವಚನ, ಸಂಧಿ, ಸಮಾಸದೋಷಗಳ ಬಗೆಗೆ—ಛಂದಸ್ಸಿನಲ್ಲಿ ಬರುವ ಗುರುಲಘುದೋಷಗಳ ಬಗೆಗೆ ಈ ಗ್ರಂಥವು ಸರಿಯಾದ ವಿವೇಕವನ್ನು ಮೂಡಿಸುವಂತಿದೆ. ಆದುದರಿಂದ ಕನ್ನಡವನ್ನು ಬಲ್ಲೆನೆಂಬವರೆಲ್ಲ ತಿಳಿದುಕೊಂಡಿರಬೇಕಾದ ಸಂಗತಿಗಳೇ ಈ ಗ್ರಂಥದಲ್ಲಿರುವುದೆಂದು ತಿಳಿದುಕೊಳ್ಳಬೇಕಾಗುತ್ತದೆ. ಕವಿರಾಜಮಾರ್ಗವನ್ನರಿಯದ ವಿದ್ವಾಂಸರು ಇನ್ನೂ ಕನ್ನಡವನ್ನು ಸರಿಯಾಗಿ ಅರಿತಿಲ್ಲವೆಂದು ನಿರ್ಣಯಿಸಬೇಕಾಗುತ್ತದೆ.

**ಪಾರ್ತಿ ಸುಬ್ಬ** (1945)

ಕನ್ನಡದಲ್ಲಿ ರಾಮಾಯಣ ಕಥೆಯ ಹಲವು ಯಕ್ಷಗಾನ ಪ್ರಸಂಗಗಳನ್ನೂ ಯಕ್ಷಗಾನ ಬಯಲಾಟದ ರಂಗಸ್ಥಳಕ್ಕೆ ಸಂಬಂಧಿಸುವ ಲಾಕ್ಷಣಿಕ ವಿಚಾರಗಳುಳ್ಳ 'ಸಭಾಲಕ್ಷಣ'ವನ್ನೂ ರಚಿಸಿದ ಕವಿ ಕುಂಬಳೆಯ ಪಾರ್ತಿಸುಬ್ಬ. ಅವನ ದೇಶ-ಕಾಲಾದಿ ವಿಚಾರವನ್ನೂ ಯಕ್ಷಗಾನ ಕಲೆಯ ಮೂಲ ಮತ್ತು ಬೆಳವಣಿಗೆ ಮುಂತಾದುವನ್ನೂ ಈ ಕೃತಿಯ ಭೂಮಿಕೆಯಲ್ಲಿ ವಿವರಿಸಲಾಗಿದೆ. ತಿಮ್ಮಪ್ಪಯ್ಯನವರು ಪಾರ್ತಿ ಸುಬ್ಬನ ಕಾಲವನ್ನು ಸುಮಾರು 1760 ಎಂದು ಅಭಿಪ್ರಾಯಪಟ್ಟಿದ್ದಾರೆ. ಹೆಚ್ಚಿನ ಸಂಶೋಧನೆಯಿಂದ ಅವನ ಯಕ್ಷಗಾನ ರಚನೆಗಳು 1590ರಿಂದ 1620ರವರೆಗೆ ನಡೆದಿವೆಯೆಂದು ಸ್ಥೂಲವಾಗಿ ನಿರ್ಣಯಿಸಲಾಗಿದೆ.[4] ಅಗ್ಗಳನ ಚಂದ್ರಪ್ರಭ ಪುರಾಣದಲ್ಲಿ ಉಲ್ಲೇಖವಾದ 'ಎಕ್ಕಲಗಾಣ' ಎಂಬುದು ಯಕ್ಷಗಾನ ಪ್ರಬಂಧಕ್ಕೂ ಅದನ್ನು ಹಾಡುವ ಭಾಗವತನಿಗೂ ಹೆಸರೆಂದು ತಿಮ್ಮಪ್ಪಯ್ಯನವರ ಸಂಶೋಧನೆ. ಆದರೆ, ಕುಕ್ಕಿಲ ಕೃಷ್ಣಭಟ್ಟರು 'ಒಬ್ಬನೇ ಹಾಡುವವನು' ಎಂಬರ್ಥವುಳ್ಳ 'ಏಕಲಗಾಯನ' ಎಂಬುದರ ತದ್ಭವ 'ಎಕ್ಕಲಗಾಣ' ಎಂತಲೂ ಚಂದ್ರಪ್ರಭ ಪುರಾಣದಲ್ಲಿ ಎಕ್ಕಲಗಾಣನು ಹಾಡಿದುದು ಯಕ್ಷಗಾನವನ್ನಲ್ಲ, ಶಾಸ್ತ್ರೀಯ ಸಂಗೀತವನ್ನೆಂದೂ ಪ್ರತಿಪಾದಿಸಿರುತ್ತಾರೆ.

ತಿಮ್ಮಪ್ಪಯ್ಯನವರು ಪಾರ್ತಿಸುಬ್ಬಕೃತಿಯಲ್ಲಿ ಪಗರಣ, ಜೆಂಡೆ, ಚತ್ರಾಣ, ಬಾಜನೆಗಬ್ಬ, ಮೆಲ್ವಾಡು. ಪಾಡುಗಬ್ಬ—ಇವನ್ನೆಲ್ಲ ತಮ್ಮದೇ ಆದ ಸಂಶೋಧನ ದೃಷ್ಟಿಯಿಂದ ವಿವರಿಸಿದ್ದಾರೆ. 'ಜೆಂಡೆ' ಎಂಬುದು ಯಕ್ಷಗಾನ ಪ್ರಸಂಗವೆಂದೂ

4 ಕುಕ್ಕಿಲ ಕೃಷ್ಣಭಟ್ಟ (ಸಂ.) ಪಾರ್ತಿಸುಬ್ಬನ ಯಕ್ಷಗಾನಗಳು, 1975, ಪೀಠಿಕೆ.

'ಪಗರಣ' ಯಕ್ಷಗಾನ ಬಯಲಾಟದ ಪ್ರದರ್ಶನ ರೂಪವೆಂದೂ ಅಭಿಪ್ರಾಯಪಟ್ಟಿರು
ವುದು ಸರಿಯೆನಿಸುತ್ತದೆ. ಯಕ್ಷಗಾನ ಕಲೆಯಂತೆಯೇ ಗಾನ, ವಾದನ, ನೃತ್ಯ, ವೇಷ
ರಚನೆಗಳ ಬಗೆಗೂ ಭೂಮಿಕೆಯ ಭಾಗದಲ್ಲಿ ವಿವರಗಳಿವೆ.

ಇದೇ ಕೃತಿಯಲ್ಲಿ 'ಪ್ರಸಂಗಸಾರ' ಎಂಬುದು ಇನ್ನೊಂದು ಭಾಗ. ಈ ಭಾಗ
ದಲ್ಲಿ ಪಾರ್ತಿಸುಬ್ಬನ ರಚನೆಗಳಾಗಿರುವ ಪಟ್ಟಾಭಿಷೇಕ, ಪಂಚವಟಿ ವಾಲಿಸಂಹಾರ,
ಉಂಗುರ ಸಂಧಿ, ಸೇತುಬಂಧನ, ಅಂಗದ ಸಂಧಾನ, ಕುಂಭಕರ್ಣ ಕಾಳಗ, ಇಂದ್ರಜಿತು
ಕಾಳಗ--ಇವುಗಳಿಂದ ಅಲ್ಲಲ್ಲಿಂದ ಆಯ್ದ ರಾಗ-ತಾಳಗತಿಯ ಪದ್ಯೋದಾಹರಣೆ
ಯೊಂದಿಗೆ ಕೃತಿಪರಿಚಯವಿದೆ. ಪಾರ್ತಿಸುಬ್ಬನ ಬಗೆಗೆ ತಿಮ್ಮಪ್ಪಯ್ಯನವರ ಕೊನೆ
ಮಾತುಗಳಿವು—"ಸುಬ್ಬನೆಂದರೆ ಮಹಾವಿದ್ವಾಂಸನಲ್ಲ. ದೋಷಗಳನ್ನೇ ನೋಡಿದರೆ,
ಅವನ ಪ್ರಬಂಧಗಳಲ್ಲಿ ಎಷ್ಟೋ ಒದಗಬಹುದು. ತನ್ನ ನ್ಯೂನತೆಯನ್ನು ತಿಳಿದು
ಕೊಂಡುದರಿಂದಲೋ ಏನೋ? ಅವನು ದೇಸಿಯಾದ ಈ ಯಕ್ಷಗಾನ ಪ್ರಬಂಧ
ದಲ್ಲಿಯೇ ಮಗ್ನನಾದನು. ಅವನು ಮಾರ್ಗಕಾವ್ಯದ ಗೊಡವೆಗೇ ಹೋಗಿಲ್ಲ ಎಂಬು
ದನ್ನರಿತು ದೋಷಜ್ಞರು ದೋಷಾನ್ವೇಷಣೆಯಲ್ಲಿ ಮಗ್ನರಾಗಬಾರದು. ಮೇಲು-
ಮಟ್ಟದ ವಿದ್ವಾಂಸರಿಗೆ ಬೋಧಿಸುವುದು ಆತನ ಗುರಿಯೇ ಅಲ್ಲ. ಸಾಮಾನ್ಯರಾದ
ನಾಡವರನ್ನು ವಿಕೃತಿಯ ಬಲೆಯಿಂದ ಬಿಡಿಸಿ ಸಂಸ್ಕೃತಿಯತ್ತ ಸೆಳೆವುದೇ ಅವನ
ಉದ್ದೇಶ....ಪಂಪನಂತೆ ಆತನ ಹಾಡುಗಳು ಗಂಭೀರವಾಗಿ ತೋರದಿದ್ದರೂ ಯಕ್ಷಗಾನ
ದಲ್ಲಿ ಅವನನ್ನು 'ನಾಡೋಜ'ನೆಂದು ಕರೆದರೆ ಒಂದಿಷ್ಟಾದರೂ ತಪ್ಪಾಗದು....
ಈ ವರೆಗೆ ಅವನ ಹೆಸರು ಪ್ರಾಂತೀಯವಾಗಿಯೇ ಇದ್ದುದು. ಕನ್ನಡದ ಎಲ್ಲ ಪ್ರಾಂತ
ದವರು ಈ ಪ್ರಬಂಧವನ್ನು ವಿವೇಚನಾಪೂರ್ವಕವಾಗಿ ಓದಿನೋಡಿ ಸುಬ್ಬನೆಂದರೆ
ಇಡೀ ಕನ್ನಡನಾಡಿನ ಮೇಲ್ಮೆವಡೆದ ಜಾನಪದ ಕವಿ ಎಂದೊಪ್ಪಿ ಕೈಗೊಂಡರೆ ನನ್ನ
ಪ್ರಯತ್ನವಿದು ಸಫಲವೆಂದು ಭಾವಿಸುತ್ತೇನೆ."

ತಿಮ್ಮಪ್ಪಯ್ಯನವರ ಈ ಮಾತು ದಿಟ. ಅವರ ಎಲ್ಲ ಬರೆಹಗಳನ್ನೂ
ಪ್ರಸ್ತಾವಿಸಿ ಸಮೀಕ್ಷಿಸುವುದೆಂದರೆ ಈ ಉಪನ್ಯಾಸದ ಪರಿಮಿತವೇಳೆಯಲ್ಲಿ ಮುಗಿ
ಯದು. ದಿಗ್ದರ್ಶನಕ್ಕಾಗಿ ಮಾತ್ರ ಈ ನಿರೂಪಣೆಯಿಂದರಿಯಬೇಕು. ತಿಮ್ಮಪ್ಪಯ್ಯ
ನವರು ಕಲಿತ ಶಾಲೆಯೋದು ನಾಲ್ಕನೆ ತರಗತಿ ಮಾತ್ರವಾದರೂ ಅವರ ವಿದ್ಯಾ
ಸಾಧನೆ ಅದೆಷ್ಟು ಆಳ ಹರಹುಳ್ಳದೆಂಬುದು ಅವರ ರಚನೆಗಳನ್ನು ಓದಿದಾಗ ವೇದ್ಯ
ವಾಗುವುದು. ಅಂಥವರ ಜನ್ಮಶತಾಬ್ದದ ಆಚರಣೆ ಎಲ್ಲೆಡೆಯೂ ಆಗುತ್ತದೆ.
ಅದರಂತೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಆಸರೆಯಲ್ಲಿಯೂ ಆಗುತ್ತಿರುವಾಗ ಅವರ
ಬದುಕು ಬರೆಹಗಳ ಒಂದು ಮೇಲ್ನೋಟವನ್ನು ಕೊಡಲು ಮಾಡಿರುವ ಅಭಿವ್ಯಕ್ತಿ
ಪ್ರಯತ್ನ ನನ್ನದು. ಅವರ ಬದುಕು ಬರೆಹಗಳ ಮರ್ಮವನ್ನರಿತು, ಅವರ ಆದರ್ಶ
ವನ್ನಿಟ್ಟುಕೊಂಡು ನಾವು ಮುನ್ನಡೆದರೆ ನಮ್ಮ ನಾಡು ಧನ್ಯ. ನುಡಿಬರಹಗಳು
ಮೂರ್ಧನ್ಯವಾಗುವುದರಲ್ಲಿ ಸಂದೇಹವಿಲ್ಲ.

---

* 29-12-1988 ರಂದು ಬಿ.ಎಂ.ಶ್ರೀ. ಪ್ರತಿಷ್ಠಾನದ ಆಶ್ರಯದಲ್ಲಿ ನೀಡಿದ ವೆಂಕಟರಂಗಪ್ಪ
ಸ್ಮಾರಕ ದತ್ತಿ ಉಪನ್ಯಾಸ.

# ಕನ್ನಡ ಸಾಹಿತ್ಯದಲ್ಲಿ ಅದ್ವೈತ

## (ಒಂದು ವರದಿ)

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು 1989 ಜನವರಿ 27ರಿಂದ ತೊಡಗಿ ಮೂರು ದಿನ 'ಕನ್ನಡ ಸಾಹಿತ್ಯದಲ್ಲಿ ಅದ್ವೈತ' ಎಂಬ ವಿಷಯವಾಗಿ ಆದಿ ಶಂಕರಾಚಾರ್ಯರ ಜಯಂತ್ಯುತ್ಸವ ಹಾಗೂ ಡಿ.ವಿ.ಜಿ. ಜನ್ಮಶತಾಬ್ದಿಯ ಸಂಸ್ಮರಣಾರ್ಥ ಒಂದು ವಿಚಾರಗೋಷ್ಠಿಯನ್ನು ವ್ಯವಸ್ಥೆ ಮಾಡಿತ್ತು. ಗೋಷ್ಠಿಯ ಅಂಗವಾಗಿ ಪ್ರತಿಷ್ಠಾನ ಪ್ರಕಟಿಸಿರುವ 30ಕ್ಕೂ ಮಿಕ್ಕ ಪ್ರಕಟನೆಗಳ ಪ್ರದರ್ಶನವನ್ನೂ ಏರ್ಪಡಿಸಿತ್ತು. ಈ ಎಲ್ಲ ಕಾರ್ಯಕಲಾಪಗಳೂ ನಗರದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಭಾಂಗಣದಲ್ಲಿ ನಡೆದವು. ತಾತ್ತ್ವಿಕ ವಿಷಯವನ್ನು ಕುರಿತ ಈ ಗೋಷ್ಠಿಗೆ ಪ್ರತಿದಿನ ಅಧಿಕ ಸಂಖ್ಯೆಯಲ್ಲಿ ಶ್ರೋತೃಗಳು ನೆರೆದಿರುತ್ತಿದ್ದುದು ಅನಿರೀಕ್ಷಿತ ಎಂದೇ ಹೇಳಬೇಕು.

ಜನವರಿ 27ರ ಸಂಜೆ ನಡೆದ ಗೋಷ್ಠಿಯ ಉದ್ಘಾಟನಾ ಸಮಾರಂಭ ಪ್ರಸಿದ್ಧ ಗಮಕಿಗಳಾದ ಶ್ರೀ ಎಸ್. ನಾಗೇಶರಾವ್ ಅವರು ಸುಶ್ರಾವ್ಯವಾಗಿ ವಾಚನ ಮಾಡಿದ ಸರಸ್ವತೀ ಸ್ತುತಿಯಿಂದ ಪ್ರಾರಂಭವಾಯಿತು. ಆ ಬಳಿಕ, ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಎಂ. ವಿ. ಸೀತಾರಾಮಯ್ಯನವರು ಗೋಷ್ಠಿಯ ಉದ್ದೇಶವನ್ನು ವಿವರಿಸಿದರು. ಎರಡು ವರ್ಷಗಳ ಹಿಂದೆಯೇ ನಡೆಸಬೇಕೆಂದು ತೀರ್ಮಾನವಾಗಿದ್ದ ಈ ಗೋಷ್ಠಿ ಈಗ ರಾಷ್ಟ್ರಾದ್ಯಂತ ಆಚರಿಸಲ್ಪಡುತ್ತಿರುವ ಆದಿ ಶಂಕರಾಚಾರ್ಯರ ಜಯಂತಿ ಹಾಗೂ ಡಿ.ವಿ.ಜಿ. ಜನ್ಮಶತಮಾನೋತ್ಸವಗಳ ಶುಭಸಂದರ್ಭದಲ್ಲಿ ನಡೆಯುತ್ತಿರುವುದು ಸಮಯೋಚಿತವಾಗಿದೆ ಎಂದರು. ಅಂದು ಬಿಡುಗಡೆಯಾಗಲಿದ್ದ ಚಂದ್ರಚೂಡಾಮಣಿ ಶತಕ ಗ್ರಂಥ ಮುಖ್ಯವಾಗಿ ವೈರಾಗ್ಯವನ್ನು ಬೋಧಿಸುವ ಗ್ರಂಥವಾದರೂ ಅದ್ವೈತಪ್ರವಣವೂ ಆಗಿರುವುದರಿಂದ ಈ ಅದ್ವೈತ ವಿಚಾರ ಗೋಷ್ಠಿಯ ಸಂದರ್ಭದಲ್ಲಿಯೇ ಪ್ರಕಟಿಸುವುದು ಉಚಿತವೆಂದು ಭಾವಿಸಿ ಗ್ರಂಥ ಪ್ರಕಟನೆಯ ನಿರ್ಧಾರವನ್ನು ಕೈಗೊಳ್ಳಲಾಯಿತು ಎಂದರು.

ಏಕೈಕ ಹಸ್ತಪ್ರತಿಯ ಆಧಾರದಿಂದ ಸಂಪಾದನೆ ಮಾಡಿರುವ ಈ ಕೃತಿಯ ಕರ್ತೃ ನಾಗವರ್ಮ ಎಂದೂ ಇವನ ಕಾಲ ಸುಮಾರು 12ನೆಯ ಶತಮಾನದ ಉತ್ತರಾರ್ಧ ಎಂದೂ ತಿಳಿಸಿ, ಎಂ.ವಿ.ಸೀ. ಅವರು ಸರ್ವರಿಗೂ ಸುಸ್ವಾಗತವನ್ನು ಬಯಸಿದರು. ಗೋಷ್ಠಿಯ ನಿರ್ದೇಶಕರಾದ ಪ್ರೊಫೆಸರ್ ಜಿ. ವೆಂಕಟಸುಬ್ಬಯ್ಯನವರು ಗೋಷ್ಠಿಯ ವಿವರಗಳನ್ನು ತಿಳಿಯಹೇಳಿದರು. ಮುಂದಿನ ಕಾರ್ಯವನ್ನು ಸಭಾಧ್ಯಕ್ಷರು ನಡಸಿಕೊಡಬೇಕೆಂದು ಅವರನ್ನು ಪ್ರಾರ್ಥಿಸಿದರು.

ಸಮಾರಂಭವನ್ನು ಉದ್ಘಾಟನೆ ಮಾಡಿದ ಪ್ರೊ॥ ಎ. ಎಸ್. ಮೂರ್ತಿರಾವ್ ಅವರು ತಾವು ಅದ್ವೈತ ತತ್ವವನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಿಲ್ಲ ಎಂದು ಒಪ್ಪಿಕೊಂಡುಬಿಡುವುದು ಸೂಕ್ತ ಎಂದು ಹೇಳಿ, ಅದ್ವೈತದ ಬಗ್ಗೆ ತಮ್ಮ ಕಲ್ಪನೆ ಏನು ಎಂಬುದನ್ನು ಹೃದಯಂಗಮವಾಗಿ ವಿವರಿಸಿದರು. ಅದ್ವೈತ ಸಿದ್ಧಾಂತ ಈ ಜಗತ್ತು ಮಿಥ್ಯೆ, ಬ್ರಹ್ಮವೊಂದೇ ಸತ್ಯ, ಎಂದು ಸಾರಿ ಹೇಳುತ್ತಿದ್ದರೂ ಪ್ರತ್ಯಕ್ಷವಾಗಿ ಸತ್ಯ ಎಂದು ಕಾಣುತ್ತಿರುವ ವ್ಯವಹಾರ ಪ್ರಪಂಚದಲ್ಲಿ ಬದುಕುತ್ತಿರುವ ನಮಗೆ ಒಂದು ಕಾವ್ಯವನ್ನು ಓದಿದಾಗ, ಒಳ್ಳೆಯ ಸಂಗೀತವನ್ನು ಕೇಳಿದಾಗ, ಒಳ್ಳೆಯ ಚಿತ್ರ ವನ್ನು ನೋಡಿದಾಗ ಆಗುವ ಆನಂದ ಅದ್ವೈತ ಸಿದ್ಧಾಂತ ಪ್ರತಿಪಾದಿಸುವ ಬ್ರಹ್ಮಾ-ನಂದವನ್ನು ಕ್ಷಣಮಾತ್ರ ಅನುಭವಿಸಿದಂತೆ ಭಾಸವಾಗುತ್ತದೆ, ಎಂದರು. ತಮಗೆ ಇಷ್ಟದೈವ, personal god, ಯಾವುದೂ ಇಲ್ಲವೆಂದೂ ನಿರಾಕಾರ ನಿರ್ಗುಣ ಬ್ರಹ್ಮವಿಚಾರ ತಮ್ಮ ಅರಿವಿಗೆ, ಅನುಭವಕ್ಕೆ, ಎಟುಕದ ವಿಷಯವೆಂದೂ ಹೇಳಿ ತಮ್ಮ ಮಾತನ್ನು ಹೀಗೆ ಮುಂದುವರಿಸಿದರು: ವೇದಾಂತವು ಬ್ರಹ್ಮ ಎಲ್ಲೆಲ್ಲೂ ಇದ್ದಾನೆ, ಪ್ರತಿಯೊಂದು ಕಣಕಣದಲ್ಲೂ ಇದ್ದಾನೆ ಎಂದು ಹೇಳುತ್ತದೆಯಷ್ಟೆ. ಈ ಎಲ್ಲೆಲ್ಲೂ ಬ್ರಹ್ಮ ಇರುವುದನ್ನು ಪಾಶ್ಚಾತ್ಯ ತತ್ವಶಾಸ್ತ್ರ ಯಾವುದನ್ನು immanent ಎಂದು ಹೇಳುತ್ತದೆಯೋ ಆ ಕಲ್ಪನೆಗೆ ಹೋಲಿಸಬಹುದು. ಹಾಗಿದ್ದರೂ ಬ್ರಹ್ಮವಸ್ತು ಭೌತಪ್ರಪಂಚವನ್ನು ಮೀರಿದ್ದು, ಅದಕ್ಕೆ ಅತೀತವಾದದ್ದು ಎಂಬ ಕಲ್ಪನೆ ಪಾಶ್ಚಾತ್ಯರ transcendental ಎಂಬ ಭೌತಾತೀತತತ್ವ ಕಲ್ಪನೆಯನ್ನು ಹೋಲುತ್ತದೆ ಎಂದು ಹೇಳಬಹುದು, ಎಂದು ಅಭಿಪ್ರಾಯಪಟ್ಟರು. ಕೊನೆಯಲ್ಲಿ, ಈಚಿನ ದಿನಗಳಲ್ಲಿ ಭೌತವಿಜ್ಞಾನದ ಸಂಶೋಧನೆಗಳು ವೇದಾಂತದ ಹತ್ತಿರ ಹತ್ತಿರಕ್ಕೆ ಹೋಗುತ್ತಿರು ವಂತೆ ಕಾಣುತ್ತದೆ ಎಂದು ಹೇಳಿ, ಒಂದು ಲಲಿತ ಪ್ರಬಂಧವನ್ನು ಓದಿದ ಅನುಭವ ವನ್ನು ಶ್ರೋತೃಗಳಿಗೆ ಒದಗಿಸಿದರು, ಶ್ರೀ ಮೂರ್ತಿರಾವ್ ಅವರು.

ಉದ್ಘಾಟನಾ ಭಾಷಣವಾದ ಮೇಲೆ ವಿದ್ವಾನ್ ಎನ್. ರಂಗನಾಥ ಶರ್ಮರು 'ಚಂದ್ರಚೂಡಾಮಣಿ ಶತಕ' ಗ್ರಂಥವನ್ನು ಬಿಡುಗಡೆ ಮಾಡಿದರು. ಕೃತಿಯ ಬಗೆಗೆ ಮಾತನಾಡುತ್ತಾ, "ಇದು ಮುಖ್ಯವಾಗಿ ವೈರಾಗ್ಯವನ್ನು ಬೋಧಿಸುವ ಗ್ರಂಥ. ಇದರ ಸಂಪಾದಕರಾದ ಶ್ರೀ ಎಂ. ವಿ. ಸೀತಾರಾಮಯ್ಯನವರು ಹೇಳುವಂತೆ ಇದು ಕನ್ನಡದ ಪ್ರಪ್ರಥಮ ಶತಕ ಗ್ರಂಥ. ಮೊದಲನೆಯ ಪದ್ಯ ಶಾರ್ದೂಲ ವಿಕ್ರೀಡಿತ ವೃತ್ತ; ಉಳಿದವೆಲ್ಲ ಮತ್ತೇಭ ವಿಕ್ರೀಡಿತದ ವೃತ್ತಗಳು. 12ನೆಯ ಶತಮಾನದ ಗ್ರಂಥವಾದರೂ ಹಳಗನ್ನಡ ಶಬ್ದರೂಪಗಳಿಗೆ ಹಲವೆಡೆ ಭಂಗ ಬಂದಿದೆ. ಶೈಲಿ ಕ್ಲಿಷ್ಟವಾಗಿರುವುದರಿಂದ, ಸಾಮಾನ್ಯ ಜನಕ್ಕೆ ಅರ್ಥವಾಗಲಿ ಎಂಬ ಸದುದ್ದೇಶದಿಂದ ಸಂಪಾದಕರು ಪ್ರತಿ ಪದ್ಯಕ್ಕೂ ಸರಳವಾದ ಗದ್ಯಾನುವಾದವನ್ನು ಕೊಟ್ಟಿದ್ದಾರೆ. ಅದರ ಅಡಿಯಲ್ಲೇ ಕಠಿನ ಪದಗಳಿಗೆ ಅರ್ಥವನ್ನು ಕೊಟ್ಟಿದ್ದಾರೆ. ಸೋಮೇಶ್ವರ ಶತಕ

ಮುಂತಾದ ಶತಕ ಗ್ರಂಥಗಳಂತೆ ಪ್ರತಿ ಪದ್ಯವೂ ಚಂದ್ರಚೂಡಾಮಣೀ ಎಂಬ ಈಶ್ವರನ ಹೆಸರಿನಿಂದ ಮುಗಿಯುವುದರಿಂದ ಗ್ರಂಥ ಚಂದ್ರಚೂಡಾಮಣಿ ಶತಕ ಎಂದು ಪ್ರಸಿದ್ಧವಾಗಿದೆ. ಜ್ಞಾನಸಾರ ಎಂದು ಇದರ ಇನ್ನೊಂದು ಹೆಸರು. ಅಲ್ಲಲ್ಲಿ ಅದ್ವೈತದ ಪ್ರಕ್ರಿಯೆ ಪ್ರತಿಪಾದ್ಯವಾಗಿದೆ. ತತ್ವಗ್ರಂಥವಾಗಿದ್ದರೂ ಹಲವು ಪದ್ಯಗಳು ಕಾವ್ಯಗುಣದಿಂದ ಶೋಭಿಸುತ್ತಿವೆ" ಎಂದು ಹೇಳಿ, ಕೆಲವು ಪದ್ಯಗಳನ್ನು ಸ್ವಾರಸ್ಯ ವಾಗಿ ವ್ಯಾಖ್ಯಾನಿಸಿ ತಮ್ಮ ಹೇಳಿಕೆಯನ್ನು ಸಮರ್ಥಿಸಿದರು. ಇಂಥ ಒಂದು ಅಪ್ರಕಟಿತ ಕೃತಿಯನ್ನು ಪ್ರಕಟಿಸಿ ಕನ್ನಡ ಕೃತಿಭಂಡಾರಕ್ಕೆ ಒಂದು ಅಪೂರ್ವ ಕಾಣಿಕೆ ಯನ್ನು ನೀಡಿದ್ದಕ್ಕಾಗಿ ಪ್ರತಿಷ್ಠಾನವನ್ನೂ ಗ್ರಂಥಸಂಪಾದಕರನ್ನೂ ಶ್ರೀ ಶರ್ಮರು ಅಭಿನಂದಿಸಿದರು.

ಅಧ್ಯಕ್ಷತೆ ವಹಿಸಿದ್ದ ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಮಾತನಾಡುತ್ತ, ಅದ್ವೈತದಲ್ಲಿ ಮೂಲತಃ ವಿಶಿಷ್ಟಾದ್ವೈತ ಮುಂತಾದ ಅನೇಕ ಪ್ರಭೇದಗಳಲ್ಲದೆ ಅದ್ವೈತದಲ್ಲಿಯೇ ಅನೇಕ ಒಳಪ್ರಭೇದಗಳೂ ಭಿನ್ನಾಭಿ-ಪ್ರಾಯಗಳೂ ಉಂಟೆಂದೂ, ಇವುಗಳಿಂದ ಮುಖ್ಯತತ್ವಕ್ಕೆ ಬಾಧೆಯಿಲ್ಲವೆಂದೂ ತಿಳಿಸಿ, ಈ ಗೋಷ್ಠಿಯಲ್ಲಿ ಈ ಬಗ್ಗೆ ವಿವರಣೆಗೆ ಅವಕಾಶ ಕಲ್ಪಿಸಿರುವುದು ಸರಿ ಯಾಗಿಯೇ ಇದೆ ಎಂದು ಅಭಿಪ್ರಾಯಪಟ್ಟರು. ಅದ್ವೈತದ ಮುಖ್ಯ ಉದ್ದೇಶ, ಎಲ್ಲರಲ್ಲೂ ಬ್ರಹ್ಮ ಇರುವುದರಿಂದ ಎಲ್ಲರೂ ಸಮಾನ ಎಂದು ತಿಳಿಸುವುದೇ ಆಗಿದೆ; ವಿಶ್ವಮಾನವತ್ವ ಅದರ ಸಂದೇಶ ಎಂದರು. ಇದು ಕೇವಲ ತತ್ವವಾಗಿ ಉಳಿಯದೆ ಆಚರಣೆಗೆ ಬರಬೇಕು ಎಂದರು.

ಜನವರಿ 28ರಂದು ಬೆಳಗ್ಗೆ ಗೋಷ್ಠಿಯ ಮೊದಲ ಸಭೆ ಸಮಾವೇಶಗೊಂಡಿತು. ಅದ್ವೈತ ದರ್ಶನವನ್ನು ಮೊತ್ತಮೊದಲಿಗೆ ಪ್ರತಿಪಾದಿಸಿದವರು, ಆದಿ ಶಂಕರಾ-ಚಾರ್ಯರು. 'ಆದಿ ಶಂಕರಾಚಾರ್ಯರ ಬದುಕು ಮತ್ತು ಸಾಧನೆ'ಯನ್ನು ಕುರಿತು ಪ್ರಬಂಧ ಮಂಡಿಸಿದವರು ಶ್ರೀ ರಾಮಚಂದ್ರ ಶಾಸ್ತ್ರಿಗಳವರು. ಶ್ರೀಯುತರು ಶಂಕರಾಚಾರ್ಯರ ಬದುಕು ಮತ್ತು ಸಾಧನೆಯ ವಿವರಣೆಗೆ ಅದ್ವೈತದರ್ಶನದ ಹಿನ್ನೆಲೆ ಯನ್ನು ಸವಿವರವಾಗಿ ನಿರೂಪಿಸಿದರು. ಭಾರತೀಯ ದರ್ಶನಧಾರೆ ವೇದಗಳ ಕಾಲ ದಿಂದಲೂ ಅವಿಚ್ಛಿನ್ನವಾಗಿ ಪ್ರವಹಿಸುತ್ತಾ ಬಂದಿದೆ. ವೇದಗಳಲ್ಲಿ ಪ್ರತಿಪಾದಿತ ವಾಗಿರುವ ದರ್ಶನವೇ ಅದ್ವೈತ ದರ್ಶನದ ಆಧಾರ. "ಏಕಂ ಸತ್ ವಿಪ್ರಾಃ ಬಹುಧಾ ವದಂತಿ" ಎಂಬಿವೇ ಮುಂತಾದ ಋಗ್ವೇದ ವಾಕ್ಯಗಳಿಂದ, ಉಪನಿಷತ್ತುಗಳಲ್ಲಿ ವಿಶದೀಕರಿಸಿರುವ ಅಭಿನ್ನತೆಯ ಮೂಲಸ್ರೋತ ಋಗ್ವೇದದಲ್ಲಿ ಸುಸ್ಪಷ್ಟವಾಗಿದೆ ಎಂದು ಹೇಳಿ, ಉಪನಿಷತ್ತುಗಳಲ್ಲಿ ಅದ್ವೈತ ದರ್ಶನದ ಸ್ಪಷ್ಟವಾದ ವ್ಯಾಖ್ಯಾನ ಸಿಕ್ಕುತ್ತದೆ ಎಂದರು. ಉಪನಿಷತ್ತಿನ ಅಧ್ಯಾತ್ಮವೇತ್ತರಾದ ಋಷಿಗಳು ನಾನಾತ್ಮಕ ವಾದ ಸತತವಾಗಿ ಪರಿವರ್ತನಶೀಲವಾದ ಹಾಗೂ ಅನಿತ್ಯವಾದ ಈ ಜಗತ್ತಿನ

ಮೂಲದಲ್ಲಿ ಇರುವ ಶಾಶ್ವತವಾದ ಸತ್ಯಾತ್ಮಕವಾದ ಪದಾರ್ಥವನ್ನು ತಾತ್ವಿಕದೃಷ್ಟಿಯಿಂದ ಅನ್ವೇಷಣ ಮಾಡಿದರು; ಹಾಗೂ, ಈ ಅನ್ವೇಷಣ ಕಾರ್ಯವನ್ನು ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ ಎಂಬ ಮೂರು ಹಂತಗಳಲ್ಲಿ ಪ್ರವರ್ತಿಸಿದರು. ಉಪನಿಷತ್ ಋಷಿಗಳು ಈ ಮೂರು ಪದ್ಧತಿಗಳ ಮೂಲಕ ಯಾವ ಪರಮತತ್ವವನ್ನು, ಅತ್ಯಂತ ಸತ್ಯಭೂತವಾದ ಪದಾರ್ಥವನ್ನು ಊಹಿಸಿರುವರೋ ಅದನ್ನೇ ಬ್ರಹ್ಮವೆಂದು ಕರೆಯುವುದು. "ಸ ಆತ್ಮಾ ತತ್ತ್ವಮಸಿ; ಅಯಮಾತ್ಮಾ ಬ್ರಹ್ಮ; ಅಹಂ ಬ್ರಹ್ಮಾಸ್ಮಿ; ಸರ್ವಂ ಖಲ್ವಿದಂ ಬ್ರಹ್ಮ"—ಇವೇ ಮುಂತಾದ ನೂರಾರು ಶ್ರುತಿವಾಕ್ಯಗಳು ಅದ್ವೈತ ದರ್ಶನವನ್ನು ಪ್ರತಿಪಾದಿಸುತ್ತವೆ—ಎಂದು ಅದ್ವೈತದ ಸ್ವರೂಪವನ್ನು ತಿಳಿಸಿಕೊಟ್ಟು, ಈ ಅದ್ವೈತದರ್ಶನವನ್ನು ಪ್ರಸ್ಥಾನತ್ರಯ—ಎಂದರೆ ವೇದ, ಉಪನಿಷತ್ತು, ಭಗವದ್ಗೀತೆ, ಈ ಮೂರಕ್ಕೆ ಭಾಷ್ಯವನ್ನು ಬರೆದು, ವಸಿಷ್ಠ, ಪರಾಶರ, ವ್ಯಾಸ, ಶುಕ, ಗೌಡಪಾದ ಹಾಗೂ ಗೋವಿಂದ ಭಗವತ್ಪಾದರ ವರೆಗೆ ಅವಿಚ್ಛಿನ್ನವಾಗಿ ಹರಿದುಬಂದ ಅದ್ವೈತದರ್ಶನವನ್ನು ಶ್ರೀ ಶಂಕರಾಚಾರ್ಯರು ಪ್ರತಿಪಾದಿಸಿದರು ಎಂದು ಶ್ರೀ ಶಾಸ್ತ್ರಿಗಳು ನಿವೇದಿಸಿದರು. ಅನಂತರ, ಶಂಕರರ ಅವತಾರಪೂರ್ವದಲ್ಲಿ ಭಾರತದ ಧಾರ್ಮಿಕ ಕ್ಷೇತ್ರದಲ್ಲಿ ಇದ್ದ ಗೊಂದಲದ ಪರಿಸ್ಥಿತಿಯನ್ನು ತಿಳಿಸಿ, ಶಂಕರರು ಅವತರಿಸಿ ವೈದಿಕಧರ್ಮವನ್ನು ಬೆಳಗಿದರು ಎಂದು ಶ್ರೀಯುತರು ತಿಳಿಸಿದರು. ಶ್ರೀ ಶಂಕರರ ಜೀವನ ವೃತ್ತಾಂತವನ್ನು ತಿಳಿಸುವ ಅನೇಕ ದಿಗ್ವಿಜಯ ಗ್ರಂಥಗಳಿವೆಯೆಂದೂ ಅವುಗಳಲ್ಲಿ ಶಂಕರರು ಮೆರೆದರೆಂದು ಹೇಳಲಾದ ಅನೇಕ ಪವಾಡಗಳು ಮುಂತಾದ ಅಸಂಗತಿಗಳು ಇರುವುವಾದ್ದರಿಂದ ಅವುಗಳನ್ನು ಎಚ್ಚರಿಕೆಯಿಂದ ಓದಬೇಕೆಂದೂ ವಿಜ್ಞಾಪಿಸಿಕೊಂಡರು. ಕ್ರಿ.ಶ. 788 ರಿಂದ 820 ರ ವರೆಗೆ ಇಹಲೋಕದಲ್ಲಿ ಜೀವಿಸಿದ್ದ ಶಂಕರರು ತಮ್ಮ 8ನೆಯ ವಯಸ್ಸಿನಲ್ಲಿ ವೇದಾಧ್ಯಯನ ಮಾಡಿ, 12ನೆಯ ವಯಸ್ಸಿನ ವರೆಗೆ ಸಕಲ ಶಾಸ್ತ್ರಗಳ ಅಧ್ಯಯನ ಮಾಡಿ, 16ನೆಯ ವಯಸ್ಸಿನಲ್ಲಿ ಪ್ರಸ್ಥಾನತ್ರಯಗಳಿಗೆ ಭಾಷ್ಯಗಳನ್ನು ರಚಿಸಿ, ತಮ್ಮ ಉಳಿದ ಆಯುಷ್ಯಭಾಗದಲ್ಲಿ ಭಾರತವನ್ನು ಮೂರು ಬಾರಿ ಸಂಚರಿಸಿ ತಾವು ಪ್ರತಿಪಾದಿಸಿದ್ದ ಉಪನಿಷದ್ದರ್ಶನವನ್ನು ಪ್ರಚಾರ ಮಾಡಿ ಅವೈದಿಕ ಮತಗಳ ಪ್ರಾಬಲ್ಯವನ್ನು ಅಡಗಿಸಿದರು, ತಾವು ಪ್ರತಿಪಾದಿಸಿದ ಅದ್ವೈತ ದರ್ಶನವನ್ನು ಉಳಿಸಿಕೊಂಡು ಬರಲು ಭಾರತದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಆಮ್ನಾಯ ಪೀಠಗಳನ್ನು ಸ್ಥಾಪಿಸಿದರು, ಇದೇ ಅವರ ಅಮೋಘ ಸಾಧನೆ ಎಂದು ಶ್ರೀ ರಾಮಚಂದ್ರ ಶಾಸ್ತ್ರಿಗಳು ತಿಳಿಸಿದರು.

"ಆದಿಶಂಕರ ಪೂರ್ವದಲ್ಲಿ ಅದ್ವೈತ" ಎಂಬ ವಿಚಾರವಾಗಿ ಪ್ರಬಂಧ ಮಂಡಿಸಿದ ಶ್ರೀ ಜಿ. ಎ. ನರಸಿಂಹಮೂರ್ತಿಯವರು, "ಶ್ರೀ ಆದಿಶಂಕರ ಭಗವತ್ಪಾದರಿಗಿಂತ ಮೊದಲೇ ಅದ್ವೈತವು ವಿವಿಧವಾಗಿ ಪ್ರತಿಪಾದಿತವಾಗಿತ್ತು. ಆದರೆ ಆಗ ಪ್ರಚಾರ

ದಲ್ಲಿದ್ದ ಎಲ್ಲ ಆಚಾರ್ಯರುಗಳ ಕೃತಿಗಳು ನಮಗೆ ಸಿಕ್ಕಿರುವುದಿಲ್ಲ. ಪ್ರಮುಖರಾದ ವ್ಯಾಸರು, ಗೌಡಪಾದರು ಮತ್ತು ಬಾದರಾಯಣರ ಗ್ರಂಥಗಳು ದೊರಕಿರುವುದು ಸುದೈವ" ಎಂದು ಹೇಳಿ, ಅದ್ವೈತ ದರ್ಶನ ಪ್ರತಿಪಾದನೆಗೆ ಅವರಿಂದ ಸಂದಿರುವ ಮಹತ್ವಪೂರ್ಣ ಕೊಡುಗೆ ಏನೆಂಬುದನ್ನು ವಿವರಿಸಿದರು. ಇವರಲ್ಲದೆ ಶುಕಮುನಿ, ಗೌಡಪಾದ, ಬಾದರಾಯಣ, ಮತ್ತು ಇತರರ ಕೊಡುಗೆಗಳನ್ನು ಸಂಕ್ಷೇಪವಾಗಿ, ವಸ್ತುನಿಷ್ಠವಾಗಿ ಶ್ರೀ ನರಸಿಂಹ ಮೂರ್ತಿಗಳು ತಿಳಿಸಿಕೊಟ್ಟರು.

"ಆದಿಶಂಕರಾಚಾರ್ಯರ ಅದ್ವೈತ ಪ್ರತಿಪಾದನೆ ಮತ್ತು ಅದರ ಪ್ರಗತಿ" ಎಂಬ ವಿಚಾರವಾಗಿ ಹೊಳೆನರಸೀಪುರದ ಶ್ರೀ ಸಚ್ಚಿದಾನಂದ ಸರಸ್ವತಿ ಅವರ ಶಿಷ್ಯರೂ, ಆ ಊರಿನ ಅಧ್ಯಾತ್ಮ ಕಾರ್ಯಾಲಯದ ಬೆಂಗಳೂರು ಶಾಖೆಯ ಅಧ್ಯಕ್ಷರೂ ಆದ ಶ್ರೀ ಕೆ. ಜಿ. ಸುಬ್ರಾಯ ಶರ್ಮರು ತಮ್ಮದೇ ಆದ ಪರಿಣಾಮಕಾರಿ ವಾಗ್ಮಿತೆಯಿಂದ ವಿಷಯವನ್ನು ವಿಶ್ಲೇಷಣೆ ಮಾಡಿದರು. ಅವರು ಹೇಳಿದರು, "ಅದ್ವೈತ ಸಾರ್ವತ್ರಿಕವಾಗಿ ಸಕಲ ಮಾನವರಿಗೂ ಇರತಕ್ಕ ಸಾರ್ವತ್ರಿಕ ಕೊಡುಗೆ. ಶಂಕರಾ-ಚಾರ್ಯರು ದೊಡ್ಡ ವಿಚಾರವಾದಿ. ಸ್ವರ್ಗ ನರಕ ದೇವರು ಇವೆಲ್ಲಾ ಮೂಢನಂಬಿಕೆ ಗಳು. ಅವರು ಪ್ರತಿಪಾದಿಸಿದ್ದು ಬ್ರಹ್ಮತತ್ವವನ್ನ; ಬ್ರಾಹ್ಮಣ ಇತ್ಯಾದಿ ನಾಲ್ಕು ವರ್ಣಗಳ ನಾಲ್ಕು ಗೋಡೆಗಳ ನಡುವೆ ಪ್ರತ್ಯೇಕ ಪ್ರತ್ಯೇಕವಾಗಿ ಇರುವುದನ್ನಲ್ಲ. ಶಂಕರರ ಅದ್ವೈತ ಪ್ರತಿಪಾದನೆಗೆ ಪ್ರಮಾಣ ಅವರು ವ್ಯಾಖ್ಯಾನಿಸಿದ ಬ್ರಹ್ಮಸೂತ್ರ ಭಾಷ್ಯ. ಜೀವ ಬ್ರಹ್ಮೈಕ್ಯದ ಬಗ್ಗೆ ಮಾತನಾಡುತ್ತ ಶಾಸ್ತ್ರಿಗಳು ಹೇಳಿದರು, ಜೀವಾತ್ಮ ಪರಮಾತ್ಮನಲ್ಲಿ ಐಕ್ಯವಾಗುವುದು ಎನ್ನುವ ತಿಳಿವಳಿಕೆ ತಪ್ಪು, ಆ ಐಕ್ಯ ಇದ್ದೇ ಇದೆ, ಮಹಾಕಾಶ ಘಟಾಕಾಶದ ಹಾಗೆ; ಆ ಐಕ್ಯ ಇದೆ ಎನ್ನುವುದನ್ನ, ಅವಿದ್ಯೆ ಅಂದರೆ ಏನು ಎನ್ನುವುದನ್ನ, ಅರ್ಥಮಾಡಿಕೊಂಡು ವಿದ್ಯೆಯ ಮೂಲಕ ತಿಳಿದು ಕೊಂಡರೆ, ಅದೇ ಬ್ರಹ್ಮಸಾಕ್ಷಾತ್ಕಾರ—ಎಂದು ಆಚಾರ್ಯರು ತೋರಿಸಿಕೊಟ್ಟರು. ಅದ್ವೈತದ ಬಗ್ಗೆ ಜನರಲ್ಲಿ ಇರುವ ಅನೇಕ ತಪ್ಪು ತಿಳಿವಳಿಕೆಗಳನ್ನು ವಿವರಿಸಿ, ಅದ್ವೈತ ಎನ್ನುವುದು ದ್ವೈತಕ್ಕೆ ಆಗಲಿ ಬೇರೆ ಯಾವುದೇ ಮತಕ್ಕಾಗಲಿ ಧರ್ಮಕ್ಕಾಗಲಿ ವಿರೋಧ ಆದದ್ದಲ್ಲ; ಅದು ಕೇವಲ ಬ್ರಾಹ್ಮಣರ ಆಸ್ತಿಯಲ್ಲ, ಸ್ಮಾರ್ತರ ಸ್ವತ್ತಲ್ಲ. ಶಂಕರಾಚಾರ್ಯರು ಅದ್ವೈತವನ್ನು ಪ್ರತಿಪಾದಿಸಿದರೇ ಹೊರತು ಅದನ್ನು ಸ್ಥಾಪಿಸಲಿಲ್ಲ. ಅದ್ವೈತ ಒಂದು ಮತವಲ್ಲ, ಧರ್ಮವಲ್ಲ. ಬ್ರಾಹ್ಮಣನಾಗಲಿ, ಶೂದ್ರನಾಗಲಿ, ಚಂಡಾಲನೇ ಆಗಲಿ, ಕ್ರೈಸ್ತ ಮುಸಲ್ಮಾನ ಬೌದ್ಧ ಜೈನ ಸಿಖ್ ಇವರಲ್ಲಿ ಯಾರೇ ಆಗಲಿ ತಮ್ಮ ತಮ್ಮ ಮತಧರ್ಮ ಸಂಪ್ರದಾಯ ಆಚಾರ ವಿಚಾರಗಳನ್ನು ಅನುಸರಿಸಿ ಕೊಂಡೇ ಅದ್ವೈತಿಗಳಾಗಿರಲು ಸಾಧ್ಯ ಎಂಬ ಕ್ರಾಂತಿಕಾರಕ ವಿಚಾರಧಾರೆಯನ್ನು ಮಂಡಿಸಿದರು.

ಅದೇ ದಿನ ಮಧ್ಯಾಹ್ನದ ಸಭೆಯಲ್ಲಿ, ಪ್ರೊ॥ ಜಿ. ವೆಂಕಟಸುಬ್ಬಯ್ಯನವರು "ಪ್ರಾಚೀನ ಕನ್ನಡ ಕೃತಿಗಳಲ್ಲಿ ಅದ್ವೈತ" ಎಂಬ ವಿಷಯವಾಗಿ ಮಾತನಾಡಿದರು. ಹನ್ನೊಂದನೆಯ ಶತಮಾನದ ಒಂದು ಶಾಸನದಲ್ಲಿ ಅದ್ವೈತಮುನಿ ಎಂಬವನು ಬರೆದ ಕೆಲವು ಅಚ್ಚಗನ್ನಡದ ಕಂದಪದ್ಯಗಳೂ ತ್ರಿಪದಿಗಳೂ ಇವೆ. ಇವು ವೈರಾಗ್ಯವನ್ನು ಬೋಧಿಸುತ್ತವೆ. ಒಂದು ಪದ್ಯದಲ್ಲಿ ಅದ್ವೈತ ವಿಚಾರವೂ ಕಂಡುಬರುತ್ತದೆ. 12ನೇ ಶತಮಾನಕ್ಕೆ ಪೂರ್ವದಲ್ಲಿ, ಗೋಷ್ಠಿಯಲ್ಲಿ ಬಿಡುಗಡೆಯಾದ ಚಂದ್ರಚೂಡಾಮಣಿ ಶತಕವನ್ನು ಬಿಟ್ಟರೆ ಅದ್ವೈತ ಪ್ರಸ್ತಾವವುಳ್ಳ ಗ್ರಂಥಗಳು ಯಾವವೂ ಇದ್ದಂತೆ ಕಂಡು ಬರುವುದಿಲ್ಲ ಎಂದು ಹೇಳಿದರು.

ಅನಂತರ, ಈ ಸಭೆಯ ಎರಡನೆಯ ಕಾರ್ಯಕ್ರಮವಾಗಿ ಮಂಗಳೂರಿನ ಶ್ರೀ ರಾಮಕೃಷ್ಣಾಶ್ರಮದ ಅಧ್ಯಕ್ಷರಾದ ಶ್ರೀ ನಿತ್ಯಸ್ಥಾನಂದ ಸ್ವಾಮಿಜೀಯವರು "ಅದ್ವೈತದರ್ಶನಕ್ಕೆ ಶ್ರೀ ರಾಮಕೃಷ್ಣಾಶ್ರಮದ ಕೊಡುಗೆ" ಎಂಬ ವಿಷಯವಾಗಿ ಬರೆದು ಕಳಿಸಿದ್ದ ಪ್ರಬಂಧವನ್ನು ಪ್ರತಿಷ್ಠಾನದ ಗ್ರಂಥಸಂಪಾದನ ವಿಭಾಗದ ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್ ಅವರು ವಾಚನ ಮಾಡಿದರು. ಸ್ವಾಮೀಜೀಯವರು ತಮ್ಮ ಪ್ರಬಂಧದಲ್ಲಿ, ಸ್ವಾಮಿ ಆದಿದೇವಾನಂದರು ಹನ್ನೊಂದು ಮುಖ್ಯ ಉಪನಿಷತ್ತುಗಳನ್ನೂ ಭಗವದ್ಗೀತೆಯನ್ನೂ ಶಂಕರಾಚಾರ್ಯರ ಭಾಷ್ಯವನ್ನು ಆಧರಿಸಿ ಕನ್ನಡಕ್ಕೆ ಅನುವಾದ ಮಾಡಿರುವುದನ್ನು ಸ್ಮರಿಸಿದರು ; ಮತ್ತು ಶಂಕರಾಚಾರ್ಯರ ಪ್ರಕರಣಗ್ರಂಥಗಳಲ್ಲಿ ಅನೇಕವು ಅನುವಾದವಾಗಿವೆ ; ಶಂಕರಾಚಾರ್ಯರ ಭಾಷ್ಯವನ್ನುಳ್ಳ ವಿಷ್ಣುಸಹಸ್ರನಾಮ, ವಿದ್ಯಾರಣ್ಯರ ಪಂಚದಶಿ ಮುಂತಾದ ಅನುವಾದಗಳ ವಿಷಯ ಗಮನಾರ್ಹ ಎಂದಿರುವರು. ಪ್ರಯಾಗದ ಹರ್ಷಾನಂದಸ್ವಾಮಿಯವರು ಅನುವಾದ ಮಾಡಿರುವ ವೇದಾಂತಸಾರದ ಅನುವಾದವೇ ಮುಂತಾಗಿ ಇನ್ನೂ ಅನೇಕ ಅದ್ವೈತಪರ ಗ್ರಂಥಗಳ ಅನುವಾದ ಕಾರ್ಯವನ್ನು ಉಲ್ಲೇಖಿಸಿ "ಶ್ರೀ ರಾಮ-ಕೃಷ್ಣಾಶ್ರಮಗಳು ಅನೇಕ ಪುಸ್ತಕಗಳನ್ನು ಪ್ರಕಟಿಸುವುದರ ಮೂಲಕ ಕನ್ನಡದಲ್ಲಿ ಅದ್ವೈತ ಸಾಹಿತ್ಯದ ಬೆಳವಣಿಗೆಗೆ ತಮ್ಮದೇ ಆದ ವಿಶೇಷ ಸೇವೆಯನ್ನು ಸಲ್ಲಿಸಿರುವುವು" ಎಂದು ತಿಳಿಸಿಕೊಟ್ಟರು.

ಅದೇ ದಿನ ಸಂಜೆಯ ಸಭೆಯಲ್ಲಿ, ಭಾಗವತ ಸಂಪ್ರದಾಯದ ಕವಿಗಳಲ್ಲಿ ಪ್ರಮುಖರಾದ ಕುಮಾರವ್ಯಾಸ ಮತ್ತು ನಿತ್ಯಾತ್ಮಶುಕಯೋಗಿಯ ಕೃತಿಗಳಲ್ಲಿ ಅದ್ವೈತ ತತ್ತ್ವ ಹೇಗೆ ಮೂಡಿಬಂದಿದೆ ಎಂಬುದನ್ನು ಡಾ॥ ಎಂ. ಎಲ್. ಲಲಿತಮ್ಮನವರು ಪ್ರಸ್ತಾವಿಸುತ್ತಾ, ಕುಮಾರವ್ಯಾಸ ಭಾರತದ ಕೆಲವು ಪ್ರಕರಣಗಳಲ್ಲಿ ಸನ್ನಿವೇಶಕ್ಕೆ ಅನುಗುಣವಾಗಿ ಅದ್ವೈತ ತತ್ತ್ವವನ್ನು ಹೇಗೆ ಕಾವ್ಯೋಚಿತವಾಗಿ ಅಳವಡಿಸಿದ್ದಾನೆ ಎಂಬುದನ್ನು ಉದಾಹರಣೆಗಳೊಡನೆ ವಿವರಿಸಿದರು.

ಶ್ರೀ ಡಿ. ಆರ್. ವೆಂಕಟರಮಣನ್ ಅವರು ತಿಮ್ಮಪ್ಪದಾಸರ 'ಅರ್ಜನ'ದ ಕೀರ್ತನೆಗಳಲ್ಲಿ ಸಗುಣೋಪಾಸನೆಯ ದ್ವಾರಾ ನಿರ್ಗುಣೋಪಾಸನೆಯನ್ನು ಹೇಗೆ ಗೇಯಮಾಧ್ಯಮದ ಮೂಲಕ ಹೃದ್ಯವಾಗುವಂತೆ ನಿರೂಪಿಸಿದ್ದಾರೆ ಎಂಬುದನ್ನು ವಿವರಿಸಿ, ಮಹಲಿಂಗರಂಗನ 'ಅನುಭವಾಮೃತ' ಕನ್ನಡದ ಅದ್ವೈತ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಕೃತಿ ಎಂದು ಪ್ರಶಂಸಿಸಿದರು. ಅದ್ವೈತ ಸಿದ್ಧಾಂತವನ್ನು ಸ್ವತಂತ್ರ ವಾಗಿ ಕನ್ನಡದಲ್ಲಿ ಬೋಧಿಸುವ ಗ್ರಂಥಗಳೇ ಇಲ್ಲದಿದ್ದ ಕಾಲದಲ್ಲಿ ಭಾಮಿನೀಷಟ್ಪದಿಯ ಛಂದಸಿನಲ್ಲಿ, ಕಾವ್ಯಮಯ ಶೈಲಿಯಲ್ಲಿ, "ಲಲಿತವಹ ಕನ್ನಡ"ದ ಮೂಲಕ ಅದ್ವೈತ ವನ್ನು ಸಾಮಾನ್ಯರಿಗೂ ಅರ್ಥವಾಗುವಂತೆ ಕೃತಿರಚನೆ ಮಾಡಿದ್ದು ದೊಡ್ಡ ಸಾಧನೆ ಎಂದರು. ಮೈಸೂರಿನ ವೇದಾಂತ ಶಿವರಾಮ ಶಾಸ್ತ್ರಿಗಳು 'ಶಂಕರಾನಂದ' ಎಂಬ ಹೆಸರಿನಲ್ಲಿ ನೂರಾರು ಅದ್ವೈತಪರ ತತ್ತ್ವಪದಗಳನ್ನು ಬರೆದಿರುವರೆಂದೂ ಅವು ಬಹು ಜನಪ್ರಿಯವಾಗಿದ್ದುವೆಂದೂ ತಿಳಿಸಿದರು.

ಅಂದಿನ ಕೊನೆಯ ಭಾಷಣ ಡಾ॥ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರದ್ದು. ಅವರ ಭಾಷಣದ ವಿಷಯ ಮುಖ್ಯವಾಗಿ ಉತ್ತರ ಕರ್ನಾಟಕದ ಶಿಶುನಾಳದ ಷರೀಫರ ತತ್ತ್ವಪದಗಳನ್ನು ಕುರಿತದ್ದಾಗಿತ್ತು. ಷರೀಫರು ಮುಸ್ಲಿಮರಾದರೂ ಅದ್ವೈತಿ ಯಾಗಿದ್ದ ಗೋವಿಂದ ಭಟ್ಟರ ಶಿಷ್ಯನಾಗಿ, ಅದ್ವೈತ ವೇದಾಂತವನ್ನು ಜನರ ಮನಸ್ಸನ್ನು ಸೂರೆಗೊಳ್ಳುವಂತೆ ಉತ್ತರ ಕರ್ನಾಟಕದ ಬಳಕೆಯ ಭಾಷೆಯಲ್ಲಿ ಹಾಡುಗಳನ್ನು ರಚಿಸಿ, ಅದ್ವೈತದ ಗೂಢಾರ್ಥಗಳನ್ನು ದೃಷ್ಟಾಂತಗಳ ಮೂಲಕ ಪ್ರತಿಮೆಗಳ ಮೂಲಕ ಅಡಗಿಸಿ ಬೋಧಿಸಿದ್ದಾನೆ ಎಂಬುದನ್ನು ಸ್ವಾರಸ್ಯವಾಗಿ ನಿರೂಪಿಸಿದರು. ತಾವೇ ಅನುವಾದ ಮಾಡಿರುವ ರಮಣ ಮಹರ್ಷಿಗಳ ಕೆಲವು ಗೀತ ಗಳನ್ನು ಪರಿಚಯ ಮಾಡಿಕೊಟ್ಟರು.

29 ರಂದು, ಗೋಷ್ಠಿಯ ಕಡೆಯ ದಿನದ ಬೆಳಗ್ಗೆ, ಬೆಂಗಳೂರು ವಿಶ್ವವಿದ್ಯಾ ನಿಲಯದ ತತ್ತ್ವಶಾಸ್ತ್ರ ಪ್ರಾಧ್ಯಾಪಕರಾದ ಡಾ॥ ಶ್ರೀನಿವಾಸ ರಾವ್ ಅವರು ಅದ್ವೈತ ದಲ್ಲಿ ಶಿವಾದ್ವೈತ, ಕೇವಲಾದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಎಂಬ ಪ್ರಭೇದಗಳು ಪ್ರಸಿದ್ಧವಾಗಿವೆ. ಆದರೆ, ಅದ್ವೈತ ನಿರೂಪಣೆಯಲ್ಲಿ ದೃಷ್ಟಿಭೇದ ಕಾರಣವಾಗಿ, ಭಿನ್ನಾಭಿಪ್ರಾಯಗಳನ್ನು ಪ್ರತಿಬಿಂಬಿಸುವ ಒಳಭೇದಗಳು ಹಲವಿವೆ ಎಂಬುದು ಅನೇಕರಿಗೆ ತಿಳಿದಿಲ್ಲ ಎಂದು ಹೇಳಿ, ಅವುಗಳ ಸ್ವರೂಪವನ್ನು ಶ್ರೀಯುತರು ವಿವರಿಸಿದರು. "ವಿಪುಲವಾದ ಚಿಂತನೆ ನಡೆದಿರುವಾಗ ಭಿನ್ನ ಅಭಿಪ್ರಾಯಗಳಿಂದ ಒಂದು ಸಾಗರವೇ ಸೃಷ್ಟಿಯಾಗುವುದರಲ್ಲಿ ಆಶ್ಚರ್ಯವೇನಿದೆ ?" ಎಂದು ಯಾರಿಗಾ ದರೂ ವಿಸ್ಮಯವಾಗುತ್ತದೆ, ಸಂಕೀರ್ಣಸ್ವರೂಪದ ಅವಾಂತರ ಭೇದಗಳಿವೆ ಅದ್ವೈತ ದಲ್ಲಿ ಎಂಬುದನ್ನು ಗಮನಿಸಿದಾಗ.

ಕನ್ನಡ ವಚನ ಸಾಹಿತ್ಯ, ನಿಜಗುಣ ಶಿವಯೋಗಿ ಮುಪ್ಪಿನ ಷಡಕ್ಷರಿ ಮತ್ತು ಸರ್ಪಭೂಷಣ ಶಿವಯೋಗಿ ಮುಂತಾದವರ ಕೀರ್ತನೆಗಳು—ಇವುಗಳಲ್ಲಿ ಶಿವಾದ್ವೈತ ಮತ್ತು ಶಕ್ತಿವಿಶಿಷ್ಟಾದ್ವೈತ ಎಂಬ ಅದ್ವೈತಪ್ರಭೇದಗಳು ಹಿನ್ನೆಲೆಯಾಗಿರುವುದರಿಂದ, "ಅದ್ವೈತಪ್ರಭೇದಗಳು" ಎಂಬ ಭಾಷಣವನ್ನು ಗೋಷ್ಠಿಯಲ್ಲಿ ಅಳವಡಿಸಿದ್ದರ ಉದ್ದೇಶ ಶಿವಶರಣರೂ ಕೀರ್ತನ ಕವಿಗಳೂ ಒಂದು ಅರ್ಥದಲ್ಲಿ ಬ್ರಹ್ಮೋಪಾಸಕರಾಗಿದ್ದವರೆ, ಸಾಧಕರು, ಬ್ರಹ್ಮಾನುಭವಿಗಳು, ಅನುಭಾವಿಗಳು. ಡಾ॥ ಸಾ. ಶಿ. ಮರುಳಯ್ಯನವರು ಈ ಅರ್ಥ ಕೊಡುವ ಮಾತುಗಳನ್ನಾಡಿ, ಅಲ್ಲಮ, ಮಹಾದೇವಿಯಕ್ಕ ಇವರ ವಚನಗಳನ್ನು ಆಧರಿಸಿ ವಚನ ಸಾಹಿತ್ಯದ ಅದ್ವೈತದೃಷ್ಟಿಯನ್ನು ಹೃದಯಂಗಮವಾಗಿ ವಿವರಿಸಿದರು.

ಮಧ್ಯಾಹ್ನದ ಸಭೆಯಲ್ಲಿ ವಿದ್ವಾನ್ ಎನ್. ರಂಗನಾಥ ಶರ್ಮರು ಡಿ.ವಿ.ಜಿ. ಅವರ 'ಭಗವದ್ಗೀತಾ ತಾತ್ಪರ್ಯ', 'ಮಂಕುತಿಮ್ಮನ ಕಗ್ಗ' ಮತ್ತು 'ಮರುಳ ಮುನಿಯನ ಕಗ್ಗ' ಈ ಕೃತಿಗಳಲ್ಲಿ ಅವರು ಅದ್ವೈತ ತತ್ತ್ವವನ್ನು ಮೊತ್ತಮೊದಲಿಗೆ ಒಂದು ಜೀವನ ಧರ್ಮವಾಗಿ ಗದ್ಯ ಪದ್ಯರೂಪದಲ್ಲಿ ವಿವರಿಸಿ, ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಬದುಕಿನಲ್ಲಿ ಅದ್ವೈತ ತತ್ತ್ವವನ್ನು ಹೇಗೆ ಅನುಷ್ಠಾನದಲ್ಲಿ ತಂದುಕೊಳ್ಳಬಹುದು ಎಂಬುದನ್ನು ಪ್ರತಿಪಾದಿಸಿದ್ದಾರೆ, ದ್ವೈತ ಅದ್ವೈತ ವಿಶಿಷ್ಟಾದ್ವೈತಗಳು ಪರಮ ಸತ್ಯವನ್ನು ಕಾಣುವ ವಿಭಿನ್ನದೃಷ್ಟಿಗಳೆಂದು ತೋರಿಸಿಕೊಟ್ಟು ಹೇಗೆ ಒಂದು ಸಮನ್ವಯ ಮಾರ್ಗವನ್ನು ಕಲ್ಪಿಸಿದ್ದಾರೆ ಎಂಬ ಹೊಸ ವಿಚಾರವನ್ನು ಡಿ.ವಿ.ಜಿ. ನಮ್ಮ ಮುಂದಿಟ್ಟಿದ್ದಾರೆ ಎಂಬುದನ್ನು ಮನಮುಟ್ಟುವಂತೆ ವಿವರಿಸಿದರು.

"ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅದ್ವೈತ" ಎಂಬುದು ತರುಣ ವಿದ್ವಾಂಸರಾದ ಡಾ॥ ಎನ್. ಎಸ್. ತಾರಾನಾಥ ಅವರ ಭಾಷಣದ ವಿಷಯ. ಅವರು ಅದ್ವೈತಪರ ಆಧುನಿಕ ಕನ್ನಡ ಸಾಹಿತ್ಯವನ್ನು ಎರಡು ವರ್ಗಗಳಾಗಿ ವಿಭಾಗಿಸಿಕೊಂಡರು: ನೇರವಾಗಿ ಪದ್ಯರೂಪದಲ್ಲೊ ಗದ್ಯರೂಪದಲ್ಲೋ ಅದ್ವೈತವನ್ನು, ಅದರ ಸಂಕೀರ್ಣ ಪ್ರಕ್ರಿಯೆಯನ್ನು ನಿರೂಪಿಸುವ ಗ್ರಂಥಗಳು ಮತ್ತು ಅದ್ವೈತ ತತ್ತ್ವದಿಂದ ಪ್ರಭಾವಿತವಾಗಿ ರಚಿಸಿರುವ ಕವಿತೆಗಳು. ಮಹಲಿಂಗರಂಗ, ಚಿದಾನಂದಾವಧೂತ, ಹೊಸಕೆರೆ ಚಿದಂಬರಯ್ಯ, ಹೊಳೆನರಸೀಪುರದ ಸಚ್ಚಿದಾನಂದ ಸರಸ್ವತಿಯವರು ಮೊದಲ ವರ್ಗಕ್ಕೆ ಸೇರುತ್ತಾರೆ ಎಂದರು; ಎರಡನೆಯ ವರ್ಗದಲ್ಲಿ ಕುವೆಂಪು, ಬೇಂದ್ರೆ, ಎಂ.ವಿ.ಸೀ., ಇವರೇ ಮೊದಲಾದವರು ಸೇರುತ್ತಾರೆಂದು ಹೇಳಿ, ಅವರುಗಳ ಕವಿತೆಯಿಂದ ಆಯ್ದ ಪಂಕ್ತಿಗಳನ್ನು ಉದಾಹರಿಸಿದರು.

ಅಂದಿನ ಸಂಜೆ ಸಮಾರೋಪ ಸಮಾರಂಭ ಜರುಗಿತು. ಮೊದಲಿಗೆ, ಅದ್ವೈತ ತತ್ತ್ವವನ್ನು ಕಾವ್ಯೋಚಿತವಾಗಿ ಒಳಗೊಂಡ 'ಕಿರಾತಾರ್ಜುನೀಯ' ಪ್ರಸಂಗದ

ಪದ್ಯಗಳನ್ನು ಕುಮಾರವ್ಯಾಸ ಭಾರತದಿಂದ ಗಮಕಿ ಎಸ್. ನಾಗೇಶರಾವ್ ಅವರು ಪರಿಣಾಮಕಾರಿಯಾಗಿ ವಾಚನ ಮಾಡಿದರು. ವಿದ್ಯಾಲಂಕಾರ ಪ್ರೊ॥ ಎಸ್. ಕೆ. ರಾಮಚಂದ್ರರಾವ್ ಅವರು ತಮ್ಮ ಸಮಾರೋಪ ಭಾಷಣದಲ್ಲಿ ವಿಚಾರ ಪ್ರಚೋದಕ ವಾದ ಕೆಲವು ಸಂಗತಿಗಳನ್ನು ಪ್ರಸ್ತಾವಿಸಿದರು.

'ಕನ್ನಡ ಸಾಹಿತ್ಯದಲ್ಲಿ ಅದ್ವೈತ ವಿಚಾರ' ಸಂಬಂಧವಾದ ಗೋಷ್ಠಿಯನ್ನು ನಡಸುವವರು ಎರಡು ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಬ್ರಹ್ಮಸೂತ್ರ ಭಾಷ್ಯದ ಮಹಾವಾಕ್ಯಗಳಾಗಲಿ ಮಾಯಾವಾದವಾಗಲಿ ಕೇವಲ ಅದ್ವೈತಕ್ಕೆ ಮಾತ್ರ ಸೀಮಿತವಾದದ್ದಲ್ಲ; ಅದ್ವೈತ, ದ್ವೈತ ವಿಶಿಷ್ಟಾದ್ವೈತಗಳಾಗಲಿ ಪಾಶ್ಚಾತ್ಯ ತತ್ವಶಾಸ್ತ್ರಗಳಾಗಲಿ, ಇವು ಮುಮುಕ್ಷುಗಳಿಗೆ ಹಾಗೂ ಜಿಜ್ಞಾಸುಗಳಿಗಾಗಿ ಮಾತ್ರ, ಎಂಬುದನ್ನು ಗಮನಿಸಬೇಕು. ಸೃಜನಶೀಲತೆ ಮತ್ತು ರಸಾಸ್ವಾದಗಳಿಗೆ ಸಂಬಂಧ ಪಟ್ಟ ಕಾವ್ಯ ಮತ್ತು ಸಾಹಿತ್ಯ ಕೃತಿಗಳಲ್ಲಿ ವೇದಾಂತ ಪ್ರಕ್ರಿಯೆಗಳನ್ನು ಹುಡುಕು ವಾಗ, ವೇದಾಂತ ಮತ್ತು ಸಾಹಿತ್ಯಕ್ಷೇತ್ರಗಳ ದೃಷ್ಟಿ ಹಾಗೂ ಪ್ರವೃತ್ತಿ ಪ್ರಯೋಜನಗಳು ಬೇರೆ ಬೇರೆ ಆಗಿರುವಾಗ ಸಾಹಿತ್ಯದಲ್ಲಿ ದರ್ಶನದ ನೆಲೆ ಗೋಚರ ವಾದೀತೆ ಎಂಬ ಪ್ರಶ್ನೆ ಏಳುತ್ತದೆ. ಇವೇ ನಮ್ಮನ್ನು ಎದುರಿಸುವ ಎರಡು ತೊಂದರೆಗಳು ಅಥವಾ ತೊಡಕುಗಳು. ಗೋಷ್ಠಿಯ ವ್ಯವಸ್ಥಾಪಕರು ಈ ಎರಡು ತೊಂದರೆಗಳನ್ನೂ ನೀಗಿಕೊಂಡು ಗೋಷ್ಠಿಯ ಕಾರ್ಯವಿವರಗಳನ್ನು ಯೋಜಿಸಿ ದ್ದಾರೆ. ಇದು ಅಭಿನಂದನೀಯ ಎಂದು ಹೇಳಿ, ದಕ್ಷಿಣ ದೇಶಗಳಲ್ಲಿ, ಮುಖ್ಯವಾಗಿ ಕರ್ನಾಟಕದಲ್ಲಿ, ಅದ್ವೈತ ಸಾಹಿತ್ಯದ ಬೆಳವಣಿಗೆಯಲ್ಲಿ ಕಂಡುಬಂದ ಆಭಾಸಗಳನ್ನೂ ಅಸಂಗತಗಳನ್ನೂ ಶ್ರೀ ರಾಮಚಂದ್ರರಾವ್ ಅವರು ವಿವರಿಸಿದರು. ಈ ಬೆಳವಣಿಗೆ ಯಲ್ಲಿ ವಿದ್ಯಾರಣ್ಯರು ರಚಿಸಿದ ಪಂಚದಶಿಯ ಪ್ರಭಾವ ಏನೆಂಬುದನ್ನು ತಿಳಿಯಹೇಳಿ, ಶಾಂಕರಾದ್ವೈತಕ್ಕೆ ಈಚಿನ ದಿನಗಳಲ್ಲಿ ಧಾರವಾಡದ ಜಯಂತಿ ಮತ್ತು ಜಯ- ಕರ್ನಾಟಕ, ವೇದಾಂತಂ ಸುಬ್ಬಯ್ಯ ಶಾಸ್ತ್ರಿಗಳು, ಶಿವರಾಮ ಶಾಸ್ತ್ರಿಗಳು, ಹೊಳೇ- ನರಸೀಪುರದ ಸಚ್ಚಿದಾನಂದೇಂದ್ರ ಸರಸ್ವತಿಯವರು ನೀಡಿರುವ ಕೊಡುಗೆ ವಿಶಿಷ್ಟ ಎಂದು ಹೇಳಿ, ಇನ್ನೊಂದು ಗೋಷ್ಠಿಗೆ ವಿಪುಲವಾದ ಸಾಮಗ್ರಿ ಇದೆ ಎಂದು ಸೂಚಿಸಿದರು.

ಗೋಷ್ಠಿಯ ಕಡೆಯಲ್ಲಿ, ಪ್ರತಿಷ್ಠಾನದ ಅಧ್ಯಕ್ಷರಾದ ಎಂ.ವಿ.ಸೀ. ಅವರು ಗೋಷ್ಠಿಗೆ ಬಹು ವಿಧಗಳಲ್ಲಿ ನೆರವಾದ ಎಲ್ಲರಿಗೂ ವಂದನೆ ಸಲ್ಲಿಸಿ, ಈ ವರ್ಷದ ಮೇ ತಿಂಗಳಲ್ಲಿ ಸಂಸ್ಥೆಯ ದಶಮಾನೋತ್ಸವವನ್ನು ನಡಸಲಾಗುವುದೆಂದೂ ದಶಮಾನೋತ್ಸವ ವರ್ಷದಲ್ಲಿ ಕೆಲವು ವಿಚಾರಗೋಷ್ಠಿಗಳನ್ನು ನಡಸಲಾಗುವುದೆಂದೂ ಪ್ರಕಟಿಸಿದರು. ಇಲ್ಲಿಗೆ ಗೋಷ್ಠಿ ಯಶಸ್ವಿಯಾಗಿ ಮುಗಿಯಿತು.

—ಎಂ.ವಿ.ಸೀ.

ಗ್ರಂಥಾವಲೋಕನ

# ಕನ್ನಡ ಛಂದಸ್ಸು*

'ಕನ್ನಡ ಛಂದಸ್ಸು' ಎಂಬ ಹೆಸರಾಂತು ಪ್ರಕಾಶಿತವಾದ ಸಂಶೋಧಾತ್ಮಕ ವಿವರವುಳ್ಳ ಗ್ರಂಥಗಳು ಈಗ ಎರಡಿವೆ. ಮೊದಲನೆಯದು ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿಯವರಿಂದ ರಚಿತವಾಗಿ 1970ರಲ್ಲಿ ಹೊರಬಂದಿದೆ. ಎರಡನೆಯದು ಇದೀಗ ಶ್ರೀ ಸೇಡಿಯಾಪು ಕೃಷ್ಣಭಟ್ಟರ ರಚನೆಯಾಗಿ ಪ್ರಥಮ ಮುದ್ರಣವೆನಿಸಿ ಪ್ರಕಾಶಿತವಾದುದು ನಮ್ಮ ಮುಂದಿದೆ. ಇದರ ರಚನೆ 1932 ರಷ್ಟು ಹಿಂದಿನದಾಗಿದ್ದು ಈಗ ಇನ್ನಷ್ಟು ವಿಶೇಷ ವಿವರಣಾತ್ಮಕ ಟಿಪ್ಪಣಿಗಳೊಂದಿಗೆ, ಉಪಯುಕ್ತ ಅನುಬಂಧಗಳೊಂದಿಗೆ ಪರಿಷ್ಕೃತವಾಗಿ 1988 ರಲ್ಲಿ ಪ್ರಕಾಶಿತವಾದ ಶಾಸ್ತ್ರಕೃತಿಯಾಗಿದೆ. ಮಾನ್ಯ ಲೇಖಕರು ಇದರಲ್ಲಿ ಅಡಕವಾದ 'ಕರ್ಣಾಟಕ ವಿಷಯ ಜಾತಿ'ಗಳೆಂಬ ಛಂದೋಬಂಧಗಳ ಲಾಕ್ಷಣಿಕ ವಿವೇಚನೆಗೆ 1927 ರಿಂದಲೇ ತಮ್ಮಿಂದ ನೆಲಗಟ್ಟು ಆಗಿದ್ದುದನ್ನು ಇದರಲ್ಲಿ ಹೇಳಿಕೊಂಡಿದ್ದಾರೆ. 1932 ದಶಂಬರದಲ್ಲಿ ಡಿ.ವಿ.ಜಿ.ಯವರ ಅಧ್ಯಕ್ಷತೆಯ ಮಡಿಕೇರಿ ಸಾಹಿತ್ಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧವಿದು. ಅನಂತರ, ತಮ್ಮ ಹೊಸ ಅನ್ವೇಷಣೆಯ ಅಂಶಗಳಾದ ಲಯ, ಗತಿ, ಧಾಟಿ ಮುಂತಾದವು ಸೇರಿ 1933 ರಲ್ಲಿ ಪರಿಷತ್ಪತ್ರಿಕೆಯ ಲೇಖನವಾಗಿ ಬಂದು, ಮತ್ತೆ ಈಗ ಹಲವಾರು ಅಧಾರಪೂರ್ಣ ಅಂಶಗಳು ಸೇರಿ ಈ ಗ್ರಂಥವೊಂದು ಸಮಗ್ರರೂಪ ತಾಳಿದುದಾಗಿ ತಿಳಿದುಬರುತ್ತದೆ. ಇದರಲ್ಲಿ ಪ್ರತಿಪಾದಿತ ಅಂಶಗಳ ಮೊತ್ತಮೊದಲ ಸಂಶೋಧಕರು ಶ್ರೀ ಸೇಡಿಯಾಪು ಅವರೇ – ಎಂಬುದಿಲ್ಲಿ ವಿದಿತವಾಗುತ್ತದೆ.

ಈ ಗ್ರಂಥದಲ್ಲಿ ಪೂರ್ವಭಾಗ ಮತ್ತು ಉತ್ತರಭಾಗ–ಎಂಬಿವು ಮುಖ್ಯವಾಗಿದ್ದು ಅನಂತರ ನಾಲ್ಕು ಪರಿಶಿಷ್ಟಗಳು, ನಾಲ್ಕು ಅನುಬಂಧಗಳು ಆಮೇಲೊಂದು ಅವಶಿಷ್ಟ—ಇಷ್ಟೊಂದು ಪ್ರಕರಣಗಳಲ್ಲಿ ವಿವರಗಳಿವೆ. ತಮ್ಮ ನಿರೂಪಣೆಗಳಲ್ಲಿ ಅಲ್ಲಲ್ಲಿ ಹೊಸ ಹೊಳಹುಗಳಿವೆ, ಅನುಭವರೇಖೆಗಳಿವೆ. ಹಲವೆಡೆ ಇವುಗಳಲ್ಲಿ ತಮ್ಮವುಗಳ ಹಾಗೂ ಇತರ ವಿದ್ವಾಂಸರುಗಳ ಪ್ರಾಕ್ಪ್ರೋಕ್ತ ಅಭಿವ್ಯಕ್ತಿಯ ತಿದ್ದುಪಡಿಗಳೂ ಇವೆ. ಕೆಲವಿವು—

1933ರ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ ತಮ್ಮ ನಿಬಂಧದಲ್ಲಿ 'ವಿಷಮಗತಿ'ಯನ್ನು 'ಅಪಕೃಷ್ಟ' ಗತಿಯೆಂದು ಹೇಳಿರುವುದಾಗಿ ತಿಳಿಸಿ, ಅದನ್ನು 'ಅವಕೃಷ್ಟ' ಎಂದು ತಿದ್ದಿಕೊಳ್ಳಲು ಸೂಚಿಸಿದ್ದಾರೆ. ಸಂಸ್ಕೃತದಲ್ಲಿ ರತಿ, ಮದನ, ಶರ ಎಂದೂ ತೆಲುಗಿನಲ್ಲಿ ಸೂರ್ಯ, ಇಂದ್ರ, ಚಂದ್ರ ಎಂದೂ ಹೆಸರಾಗಿರುವ ಬ್ರಹ್ಮ, ವಿಷ್ಣು, ರುದ್ರ

---

* ಕನ್ನಡ ಛಂದಸ್ಸು—ಲೇ : ಸೇಡಿಯಾಪು ಕೃಷ್ಣಭಟ್ಟ ; ಪ್ರ : ಸಾಹಿತ್ಯ ಸಂಘ, ಮಣಿಪಾಲ, 576119 ; ಪುಟಗಳು : ಡೆಮ್ಮೈ 172 ; ಬೆಲೆ : ರೂ. 35 – 00 (1988)

ಗಣಗಳಿಗೆ ಪ್ರಚಲಿತವಾಗಿ ರ, ಲ, ಧ – ಎಂಬ ಅಕ್ಷರಸಂಜ್ಞೆಯನ್ನು ಪ್ರಸ್ತಾವಿಸಿ, ರುದ್ರಗಣಕ್ಕೆ 'ಧ' ಎಂಬ ಸಂಜ್ಞೆ ತಪ್ಪೆಂದೂ 'ಘ' ಎಂಬ ಸಂಜ್ಞೆಯಿರಬೇಕೆಂದೂ ತಿಳಿಸಿದ್ದಾರೆ. ಹೀಗೆಂದಿರುವುದು ಜಯಕೀರ್ತಿಯ ಛಂದೋನುಶಾಸನದಲ್ಲಿ ಹೇಳಿದು ದಕ್ಕೆ ಸರಿಯಾಗಿಯೇ ಇದೆ. ಕಿಟ್ಟೆಲರ ಛಂದೋಂಬುಧಿಯಲ್ಲಿ 'ಕನ್ನಡ ವಿಷಯ ಜಾತಿ'ಯನ್ನು 'ಮಾತ್ರಾಗಣಂಗಳ್' ಎಂದು ಮುದ್ರಿಸಿದ ತಪ್ಪನ್ನೆ ಇತರ ವಿದ್ವಾಂಸರು ಅನುಸರಿಸುತ್ತಿರುವುದನ್ನು ಇವರು ಇಲ್ಲಿ ಖಂಡಿಸಿರುತ್ತಾರೆ. ಬಾದಾಮಿ ಶಾಸನದ 'ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ' ಎಂಬಲ್ಲಿ ಮಾಧುರ್ಯಂ ಎಂಬುದಕ್ಕೆ 'ಮಧುರನು' ಎಂಬರ್ಥವಲ್ಲ ; 'ಧುರೀಣಾಗ್ರೇಸರನು' ಎಂಬುದೇ ಅರ್ಥವೆಂದು ಪ್ರತಿಪಾದಿಸಿರುತ್ತಾರೆ. 'ಅರಭಟ್ಟ' ಎಂಬುದು ಶೂರ, ಸಾಹಸಿ – ಎಂಬ ಅರ್ಥ ಕೊಡುವ 'ಆರಭಟ' ಆಗಿರಬಹುದೇನೋ – ಎಂಬ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ.[1]

ಕನ್ನಡ ಛಂದಸ್ಸಿನ ಅರಿವಿಗೆ ಅದರ ಧಾಟಿಯೇ ಮುಖ್ಯವೆಂದು ದೃಢಪಡಿಸಿರು ವುದು ಈ ಕೃತಿಯದೊಂದು ವೈಶಿಷ್ಟ್ಯ. ಹಿಂದಿನ ಕಾಲದ ನಾನಾ ಛಂದೋಬಂಧ ಗಗನ್ನು ಓದುವ ಅಭ್ಯಾಸ ಇಂದಿನವರಿಗೆ ಬಹುಧಾ ಇಲ್ಲದುದರಿಂದ, ಛಂದೋನು- ಗುಣವಾಗಿ ಓದುವಾಗ ಪದಸ್ವರೂಪವೂ ಪದಾನುಗುಣವಾಗಿ ಪಠಿಸುವಾಗ ಛಂದೋ ಗತಿಯೂ ಕೆಡುವುದು ಸಾಮಾನ್ಯವೆಂಬುದನ್ನು ತಿಳಿಸಿದ್ದಾರೆ. ಪದಸ್ವರೂಪವೂ ಛಂದೋಗತಿಯೂ ಕೆಡದಂತೆ ಹಾಡುವ ಸಂಪ್ರದಾಯವು ಇಂದು ತೆಂಕುತಿಟ್ಟಿನ ಯಕ್ಷಗಾನ ಭಾಗವತರಲ್ಲಿ (ಕೆಲವರಲ್ಲಿ ಮಾತ್ರ) ಉಳಿದಿದೆ – ಎಂಬ ಅಭಿಪ್ರಾಯ ನೀಡಿದ್ದಾರೆ. ಅಕ್ಷರ, ವರ್ಣ[2] – ಈ ಶಬ್ದಗಳಿಗೆ 'ಹಾಡು' ಎಂಬ ಅರ್ಥವಿರುವುದನ್ನು ಸ್ಪಷ್ಟಪಡಿಸಿದ್ದಾರೆ.

ತ್ರಿಪದಿಯನ್ನು ವೀರಶೈವ ಕವಿಗಳು ಆಯ್ದುಕೊಂಡು ಅದರಲ್ಲಿ ಬರುವ ವಿಷ್ಣುಗಣಗಳನ್ನು ಪಂಚಮಾತ್ರಾಗಣಗಳ ಮಾತ್ರಾಬಂಧಗಳನ್ನಾಗಿ ಮಾಡಿಕೊಂಡು 'ತ್ರಿವಿಧಿ'ಯೆಂದು ಕರೆದುಕೊಂಡುದಾಗಿ ಅಭಿಪ್ರಾಯಪಟ್ಟಿದ್ದಾರೆ. ಸರ್ವಜ್ಞನ ಹಲವಾರು ತ್ರಿಪದಿಗಳು ಹೀಗಿದ್ದರೂ ಅವಕ್ಕೆ 'ತ್ರಿವಿಧಿ' ಎಂಬ ಹೆಸರಾಗದಿದ್ದುದು ಈ ಅಭಿಪ್ರಾಯಕ್ಕೆ ಅಪವಾದವಾಗುತ್ತದೆ. ನೇಮಿಚಂದ್ರನು 'ತ್ರಿಪದಿ'ಯನ್ನು 'ತ್ರಿವುಡೆ' ಎಂದಿರುವುದೂ ಇಲ್ಲಿಯ ವಿವರಣೆಗೆ ಉಳಿದ ವಿಷಯವಾಗುತ್ತದೆ.[3]

---

1 'ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್' ಎಂಬುದನ್ನು 'ಬಾಧಿಪ್ಪ ಕಲಿಗೆ ಕಲಿ, ಯುಗವಿಪರೀತನ್' ಎಂದು ಓದಿ ಅರ್ಥಮಾಡಬೇಕೆಂದು ಒಂಪೆಡೆ ಪ್ರೊ॥ ಜಿ. ವೆಂಕಟಸುಬ್ಬಯ್ಯ ನವರು ವಿವರಿಸಿರುವುದು ಕೂಡ ಈ ತ್ರಿಪದಿಯ ಅರ್ಥಾನ್ವೇಷಣೆಯಲ್ಲಿ ಲಕ್ಷ್ಯಾರ್ಹವಾಗಿದೆ.

2 ಬೇರೊಂದೆಡೆ 'ವರ್ಣ' ಎಂದರೆ ಹಾಡು ಎಂದು ಪ್ರೊ॥ ಎಂ.ವಿ ಸೀ. ಅವರು ಅರ್ಥವಿ ಸಿರುವುದನ್ನು ನೆನೆಯಬಹುದು.

3 ಈ ವಿಷಯದಲ್ಲಿ ನನ್ನ 'ಸಂಶೋಧನ ರತ್ನಮಾಲಿಕೆ' ಎಂಬ ಗ್ರಂಥದಲ್ಲಿರುವ 'ಒನಕೆ ಹಾಡು' ಎಂಬ ಪ್ರಬಂಧವನ್ನು ಕುತೂಹಲಿಗಳು ಪರಾಮರ್ಶಿಸಬಹುದು.

ತ್ರಿಪದಿ ಬರುಬರುತ್ತಾ ಮಾತ್ರಾಬಂಧವಾಯಿತೆಂದು ಹೇಳುವ ಮಾತಿನಲ್ಲಿ ಹುರುಳಿಲ್ಲವೆಂದು ಶ್ರೀ ಸೇಡಿಯಾಪು ಅವರು ತಿಳಿಸಿರುತ್ತಾರೆ. 'ರಗಳೆ' ಎಂಬುದು ರಗಣಘಟಿತ ಗೀತವೆಂದೂ ಈ ರಗಳೆಗಳು ಕನ್ನಡದ ಪರಂಪರೆಗೆ ಅನುಗುಣವಾಗಿ ಲಗಾದಿ ಗಣನಿಷೇಧವನ್ನು ಉಳಿಸಿವೆಯೆಂದೂ ಹೇಳಿರುವುದು ಒಪ್ಪತಕ್ಕ ಸಂಗತಿ.

ಸಾಂಗತ್ಯದ ಛಂದೋಲಕ್ಷಣವನ್ನು ತಿಳಿಸುತ್ತ ಮಾನ್ಯ ಲೇಖಕರು, 1927 ರಲ್ಲಿ ಪ್ರಕಟವಾದ ಕನ್ನಡ ಕೈಪಿಡಿಯ ಪ್ರಥಮ ಮುದ್ರಣದಲ್ಲಿ ಸಾಂಗತ್ಯಲಕ್ಷಣವನ್ನು ಮಾತ್ರಾಗಣನೆಯಿಂದ ಹೇಳಿದುದರ ತಿದ್ದುಪಡಿಗೆ ತಾವೇ ಕಾರಣರಾದುದನ್ನು ನಿರೂಪಿಸಿದ್ದಾರೆ. ಯತಿಯ ಬಗೆಗೆ ಲೇಖಕರು ವಿಶೇಷ ಸಂಶೋಧನೆ ಮಾಡಿದ್ದಾರೆ. ಯತಿಯೆಂಬುದು 'ಅಭ್ಯಾಸ ಸಂಸ್ಕೃತವಾದ ಶ್ರುತಿವಿಷಯ'ವೆಂದು ತಿಳಿಸಿದ್ದಾರೆ. 'ಯತಿಯೆಂಬುದುಸಿರ್ವ ತಾಣಂ' ಎಂಬ ಕವಿರಾಜಮಾರ್ಗದ ಮಾತನ್ನೆತ್ತಿ 'ಉಸಿರ್' ಎಂಬ ಕ್ರಿಯಾಪದಕ್ಕೆ 'ಹೇಳು' ಎಂಬ ಅರ್ಥವೇ ಇರುವುದೆಂದೂ 'ಉಸಿರು ಬಿಡು' ಎಂಬರ್ಥವನ್ನು ತಾವೆಲ್ಲಿಯೂ ಕಂಡಿಲ್ಲವೆಂದೂ ತಿಳಿಸಿ, 'ಉಸಿರ್ವ ತಾಣಂ' ಎಂಬುದಕ್ಕೆ 'ಹೇಳುವ ಸ್ಥಾನ' ಎಂದು ಅರ್ಥ ಮಾಡಿದ್ದಾರೆ. ಆದರೆ ಪಂಪನ ಆದಿಪುರಾಣದಲ್ಲಿ (ಆಶ್ವಾಸ 3, ಪದ್ಯ 23) ಉಸಿರಾಡು, ಉಸಿರು ಬಿಡು—ಎಂಬರ್ಥದಲ್ಲಿಯೇ 'ಉಸಿರ್' ಶಬ್ದವಿದೆ. ಆದುದರಿಂದ ಅರ್ಥಕ್ಕಾಗಿ ಚಡಪಡಿಸಬೇಕಾಗಿರಲಿಲ್ಲ.

ಪರಿಶಿಷ್ಟಗಳಲ್ಲಿ ಆಧುನಿಕ ಪದ್ಯರಚನೆಗಳ ಪ್ರಸ್ತಾಪವಿದೆ. ಅವುಗಳಲ್ಲಿ ಯತಿಭಂಗ, ಗಣರೂಪಭಂಗಗಳನ್ನು ಉದಾಹರಿಸಿದ್ದಾರೆ. ಲಗಂ ಎಂಬ ಗಣರೂಪ ಕೆಲವೆಡೆ ಹೇಗೆ ಭಾವಮಾಧುರ್ಯವನ್ನು ತರುತ್ತದೆಂಬುದನ್ನು ತಿಳಿಸಿದ್ದಾರೆ. ಕನ್ನಡದ ಎಷ್ಟೋ ಹಾಡುಗಳು (ಅಷ್ಟತಾಳದವು) ತ್ರಿಮೂರ್ತಿಗಣ ಘಟಿತವಾಗಿರುವುದನ್ನು ಉದಾಹರಿಸಿದ್ದಾರೆ. ಇಂಗ್ಲಿಷಿನಲ್ಲಿ ಬಂದಿರುವ 'ರಿದಂ' ಎಂಬುದು 'ಲಯ'ವಲ್ಲ 'ಗತಿ' ಎಂದು ದೃಢಪಡಿಸಿದ್ದಾರೆ. ತ್ರಿಪದಿಲಕ್ಷಣ ವಿವರಣೆಯಲ್ಲಿ ಛಂದೋಮಾತ್ರೆ (ಅಥವಾ ಅಕ್ಷರಮಾತ್ರೆ) ಮತ್ತು ತಾಳಮಾತ್ರೆ ಎಂಬೆರಡನ್ನೂ ತಿಳಿಸಿ, ತ್ರಿಪದಿಲಕ್ಷಣವನ್ನು ಮಾತ್ರಾನಿಯಮದಿಂದ ಹೇಳುವ ಯಾರ ಪ್ರಯತ್ನವೂ ಸಫಲವಾಗಿಲ್ಲವೆಂದು ತಿಳಿಸಿದ್ದಾರೆ.

ಮೂರನೆಯ ಅನುಬಂಧದಲ್ಲಿ 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ಪ್ರಬಂಧವು ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ 27-8-1976 ರಲ್ಲಿ ಮಾಡಿದ ದತ್ತಿ ಉಪನ್ಯಾಸದ ಪುನರ್ಮುದ್ರಣವಾಗಿರುತ್ತದೆ. ನಾಲ್ಕನೆಯ ಅನುಬಂಧದಲ್ಲಿ ಛಂದೋವತಂಸದ ಲಕ್ಷಣಸಮೀಕ್ಷೆಯಿದೆ. ಛಂದೋವತಂಸವು ಪಿರಿಯಕ್ಕರದ ಅನುಬಂಧಿಯಾಗಿ ಇದ್ದಿರಬೇಕೆಂದೂ ಈ ಯುಗ್ಮವೇ ಮಾತೃಕೆಯಾಗಿ 'ಸೀಸ ಮತ್ತು ಒಂದು ಗೀತ' ಎಂಬೀ ಯುಗ್ಮವು ತೆಲುಗಿನಲ್ಲಿ ಹುಟ್ಟಿಕೊಂಡಿತೆಂದೂ ಊಹಿಸಲಾಗಿದೆ.

ಮಾನ್ಯ ಲೇಖಕರು ವ್ಯಾಕರಣ, ಛಂದಶ್ಶಾಸ್ತ್ರಗಳಲ್ಲಿ ಪರಿಣತರು ಮಾತ್ರವಲ್ಲ, ಇತರರನ್ನು ಕೈಮೀರಿಸುವ ಸಂಶೋಧನಪಟುವಾಗಿದ್ದಾರೆ. ಇಂತಹ ಸಂಶೋಧನೆಗಳಿಗೆ ಆದ್ಯರೂ ಹೌದು. ಪಿರಿಯಕ್ಕರ, ಗೀತಿಕೆ, ತ್ರಿಪದಿ ಮುಂತಾದ ಅಂಶಚ್ಛಂದಸ್ಸಿನ ರಚನೆಗಳ ಧಾಟಿಯನ್ನು ಸಾಕ್ಷಾತ್ಕರಿಸಿ, ಆತ್ಮಪ್ರತ್ಯಯದಿಂದ ನಿರೂಪಣೆ ಮಾಡಿದವರು. ಅವರಿಂದ ರಚಿತವಾದ 'ಛಂದೋಗತಿ' ಎಂಬ ಲಾಕ್ಷಣಿಕ ಸಂಶೋಧನ ಗ್ರಂಥ ಈ ಮೊದಲೇ ವಿದ್ವನ್ಮಾನ್ಯವಾಗಿದೆ. ಪ್ರಕೃತ ಹೊರಬಂದ 'ಕನ್ನಡ ಛಂದಸ್ಸು' ಅಷ್ಟೇ ಸಂಶೋಧನ ಮೌಲ್ಯವುಳ್ಳುದಾಗಿದೆ. ವಯೋಮಾನ ಹಾಗೂ ದೃಷ್ಟಿದೋಷ – ಇವುಗಳಿಂದ ಬಾಧಿತವಾದ ಸ್ಥಿತಿಯಲ್ಲಿಯೂ ಇವರಿಂದ ಅಮೋಘ ಸಾಹಿತ್ಯಶಾಸ್ತ್ರಸೇವೆಯಾಗುತ್ತಿರುವುದು ಲೋಕದ ಭಾಗ್ಯ. ಕನ್ನಡಿಗರು ಇವರ ಗ್ರಂಥಗಳನ್ನು ಆಸಕ್ತಿಯಿಂದ ಅಭ್ಯಾಸ ಮಾಡದೆ ಇರಲಾರರು.

—ಟಿ. ಕೇಶವ ಭಟ್ಟ

# ಪ್ರತಿಮಾ ಕೋಶ*

ಕಲ್ಪತರು ರಿಸರ್ಚ್ ಅಕಾಡಮಿಯವರು ಪ್ರಕಟಿಸಿರುವ ಈ ಪ್ರತಿಮಾ ಕೋಶ ಸಂ. 1 ನ್ನು ರಚಿಸಿದ ಗ್ರಂಥಕರ್ತರು ಭಾರತೀಯ ಮೂರ್ತಿಶಿಲ್ಪದ ವಿಶ್ವಕೋಶ ವೆಂದು ಹೇಳಿಕೊಂಡಿರುತ್ತಾರೆ. ಈಗಾಗಲೇ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಮೇಲೆ ಅನೇಕ ಗ್ರಂಥಗಳನ್ನು ಬರೆದು ಚಿರಪರಿಚಿತರಾಗಿರುವ ಲೇಖಕರು ಇಂತಹ ಗ್ರಂಥದ ರಚನೆಗೆ ಅರ್ಹರೂ ಆಗಿರುತ್ತಾರೆಂಬುದರಲ್ಲಿ ಸಂಶಯವಿಲ್ಲ.

ಪ್ರತಿಮಾ ಕೋಶ ಸಂ. 1 ನ್ನು ಗಮನಿಸಿದಾಗ ಪ್ರಕಾಶಕರಾಗಲಿ, ಲೇಖಕ ರಾಗಲಿ, ಕೆಲವೊಂದು ಸುಧಾರಣೆಗಳನ್ನು ಮಾಡಬಹುದಿತ್ತು. ಗ್ರಂಥದಲ್ಲಿ ಉದಾಹರಣರೂಪವಾಗಿ ನೀಡಿರುವ ಕೆಲವು ರೇಖಾಚಿತ್ರಗಳನ್ನು ಗಮನಿಸಿದಾಗ ಅವುಗಳ ಮೂಲ ಉದ್ದೇಶವೇ ವ್ಯತ್ಯಾಸವಾಗಿರುವಂತೆ ಭಾಸವಾಗುತ್ತದೆ. ಉದಾಹರಣೆಗೆ ಅತಿಭಂಗ. ಇಲ್ಲಿ ಈ ಚಿತ್ರಗಳನ್ನು ಗಮನಿಸಿದಾಗ ಅವು ನೃತ್ಯದ ಅಥವಾ ಕೋಲಾಟದ ಚಿತ್ರಗಳೆಂಬಂತೆ ಭಾಸವಾಗುತ್ತವೆ. ಅವು ಸಂಹಾರ ರೀತಿಯ ಆಸೀನ ಭಂಗಿಯ ಶಿಲ್ಪಗಳೆಂದು ತಟ್ಟನೆ ತಿಳಿಯುವುದಿಲ್ಲ.

ನಾಲ್ಕು ರೇಖಾಚಿತ್ರಗಳನ್ನು ನೀಡುವುದಕ್ಕಿಂತಲೂ ಕೋಲಾರಮ್ಮನ ಅಥವಾ ಹಳೇ ಆಲೂರಿನ ಚಾಮುಂಡಿಯ ಸರಿಯಾದ ಒಂದು ರೇಖಾಚಿತ್ರವನ್ನು ನೀಡಿದ್ದರೆ ಸಾಕಾಗಿತ್ತು. ಇದೇ ಮಾತು ಋಷಿಗಳ ರೇಖಾಚಿತ್ರಗಳಿಗೂ ಅನ್ವಯಿಸುತ್ತದೆ. ಅಲಂಪುರದಲ್ಲಿ ಅನೇಕ ಪಾಶುಪತ ಮುನಿಗಳ ಶಿಲ್ಪಗಳಿದ್ದುವು. ಅವನ್ನೂ ಬಳಸಿ ಕೊಳ್ಳಬಹುದಿತ್ತು. ಈ ಗ್ರಂಥದಲ್ಲಿ ಬಳಸಿರುವ ಋಷಿಗಳ ಚಿತ್ರ ವಿದೂಷಕರ ಚಿತ್ರಗಳೆಂಬಂತೆ ಭಾಸವಾಗುತ್ತವೆ. ಇಲ್ಲಿಯೂ ಒಂದೇ ಉದಾಹರಣೆ ಸಾಕಾಗಿತ್ತು. ದಿಕ್ಪಾಲಕರ ವರ್ಣನೆ ಮಾಡುವಾಗ ಹಿಂದೆ ಅವರ ಹೆಸರು ಬಂದಾಗಲೇ ವಿವರಣೆ ನೀಡಿ ಮುಂದೆ ಅವರ ಹೆಸರಿನ ಉಲ್ಲೇಖ ಬಂದ ಕಡೆ ನೋಡಿ, ಪುಟ ನೋಡಿ ಎಂದೋ ಅಥವಾ ಹೆಸರನ್ನೋ ಹೇಳಬಹುದಿತ್ತು. ಇಲ್ಲಿ ಎರಡೂ ಕಡೆ ವರ್ಣಿತವಾಗಿ ವಿಷಯ ಒಂದು ಕಡೆ ಕೇಂದ್ರೀಕೃತವಾಗದೆ ಚದುರಿರುತ್ತದೆ.

---

**Pratima Kosa,** Vol. I. (An Encyclopaedia of Indian Iconography) by Vidyalankara Prof. S. K. Ramachandra Rao.

Published by G. K. Anantharam, I. B. H. Prakasana, Gandhinagar, Bangalore - 560 009 for Kalpataru Research Acadamy, Post Box No. 1857, Bangalore-560 018, 1983. Pages 213 + viii, Price: 116–00

ಅನೇಕ ಕಡೆ ಒಂದೇ ರೀತಿಯ ಚಿತ್ರಗಳು ಬೇರೆ ಬೇರೆ ಕಡೆ ಉದಾಹೃತವಾಗದೆ ಒಂದು ಕಡೆ ಒಂದು ಚಿತ್ರ ನೀಡಿ ಉಳಿದ ಕಡೆಗೆ ವಿವರಣೆ ಬರುವಾಗ 'ನೋಡಿ' ಚಿತ್ರಕ್ಕೆ ಪುಟ ..ಎಂದು ಹೇಳಬಹುದಿತ್ತು. ಅನೇಕ ಕಡೆಗಳಲ್ಲಿ ರೇಖಾಚಿತ್ರವನ್ನು ಚಿಕ್ಕದಾಗಿ ನೀಡಿ ಪುಟಗಳನ್ನು ಅನೇಕ ಉಳಿಸಬಹುದಿತ್ತು.

ಅನೇಕ ರೇಖಾಚಿತ್ರಗಳ ಆಕರವನ್ನಾಗಲೀ, ದೊರೆತ ಸ್ಥಳವನ್ನಾಗಲೀ ತಿಳಿಸಿಲ್ಲ. ಇವನ್ನು ತಿಳಿಸಿದ್ದಲ್ಲಿ ಅಧಿಕಾರಯುತವಾಗಿರುತ್ತಿತ್ತು. ಇನ್ನೊಂದು ಮುಖ್ಯ ಅಂಶವೆಂದರೆ ಭಾರತೀಯ ಪ್ರತಿಮಾಕೋಶವೆಂದು ಹೆಸರಿಟ್ಟುಕೊಂಡು ನೀಡಿರುವ ಉದಾಹರಣೆಗಳೆಲ್ಲವೂ ಬಹುತೇಕ ತಮಿಳುನಾಡಿನವೇ ಆಗಿರುತ್ತವೆ. ಅರ್ಧನಾರೀಶ್ವರ, ಉಮಾಮಹೇಶ್ವರ ಇಂತಹ ಶಿಲ್ಪಗಳಿಗಾದರೂ ಬಾದಾಮಿ, ಅಥವಾ ಅರಳಗುಪ್ಪೆಯಲ್ಲಿಯ ಕೆಲವು ಉದಾಹರಣೆಗಳನ್ನು ನೀಡಬಹುದಿತ್ತು. ಅಷ್ಟೇ ಅಗಸ್ತ್ಯೇಶ್ವರನ ಪ್ರಸ್ತಾಪ ಬಂದಾಗಲೂ ಲೇಖಕರಿಗೆ ತಿರುಮಕೂಡಲಿನ ನೆನಪೂ ಬರುವುದಿಲ್ಲ. ಬೇರೆಲ್ಲಿಯೂ ಉದಾಹರಣೆಗಳು ದೊರೆಯದಿದ್ದಾಗ ಮಾತ್ರ ಇತರೆಡೆಯ ಅಂದರೆ ತಮಿಳುನಾಡಿನ ಉದಾಹರಣೆಗಳ ಜೊತೆಗೆ ಇತರ ಪ್ರಾಂತಗಳ ಉದಾಹರಣೆ ನೀಡಿರುತ್ತಾರೆ. ಹೀಗಾಗಿ ಉದಾಹರಣೆಗಳೆಲ್ಲವೂ ತಮಿಳುನಾಡಿನವೇ ಆಗಿರುವುದರಿಂದ ತಮಿಳುನಾಡಿನ ಪ್ರತಿಮಾಕೋಶವೆಂಬ ಹೆಸರು ಅನ್ವಯಿಸುತ್ತದೆ.

ಎಷ್ಟೋ ಹಿರಿಯ ವಿದ್ವಾಂಸರಾಗಲಿ ಆಕರ ಗ್ರಂಥಗಳ ಬಗ್ಗೆ ಉಲ್ಲೇಖಿಸುವಾಗ ತಾವು ಉಪಕೃತರಾಗಿರಬಹುದಾದ ಎಲ್ಲಾ ಗ್ರಂಥಗಳನ್ನೂ ಹೆಸರಿಸಬೇಕಾಗುತ್ತದೆ. ಆದರೆ ಈ ಗ್ರಂಥದಲ್ಲಿ ಸಂಸ್ಕೃತ ಗ್ರಂಥಗಳನ್ನು ಹೆಸರಿಸಿ, ಉಳಿದ ಪುಸ್ತಕಗಳ ಬಗ್ಗೆ ಹೆಸರಿಸುವಾಗ 'Books consulted (only major ones included)' ಎಂದು ಹೇಳಿರುತ್ತಾರೆ. ಲೇಖಕರು ಸಣ್ಣ ಗ್ರಂಥಗಳಿಂದ ಉಪಕೃತರಾಗಿದ್ದರೂ ಹೆಸರಿಸಲು ಯೋಗ್ಯತೆ ಪಡೆದಿಲ್ಲವೆಂಬ ತೀರ್ಮಾನಕ್ಕೆ ಬಂದಿರುವಂತೆ ಕಾಣಬರುತ್ತದೆ. ಸಂಶೋಧನೆಯಲ್ಲಿ ಮುಖ್ಯ-ಅಮುಖ್ಯ ಗ್ರಂಥಗಳೆಂಬ ಭೇದ ಸಲ್ಲದು.

ಒಳಗೊಂಡಿರುವ ವಿಷಯವ್ಯಾಪ್ತಿಯ ದೃಷ್ಟಿಯಿಂದ ಈ ಗ್ರಂಥ ಬಹು ಪ್ರಮುಖ ಆಕರ ಗ್ರಂಥವಾಗುವುದರಲ್ಲಿ ಸಂಶಯವಿಲ್ಲ. ಚಿತ್ರಗಳ ಸಹಾಯದಿಂದ ವಿವರಿಸಲು ಪ್ರಯತ್ನಿಸಿರುವುದರಿಂದ ಹೆಚ್ಚಿನ ಪ್ರಾಮುಖ್ಯ ಈ ಗ್ರಂಥಕ್ಕೆ ಬಂದಿರುತ್ತದೆ. ತಂತ್ರಸಾರವನ್ನಾಧರಿಸಿ ಬಹು ಅಪರೂಪದ ಅರ್ಧಲಕ್ಷ್ಮೀ ಹರಿ ಎಂಬ ಬಿಂಬದ ವಿವರಣೆ ನೀಡಿರುತ್ತಾರೆ. ಆಯುಧಗಳನ್ನು ತಾಮಸಿಕ, ರಾಜಸಿಕ, ಸಾತ್ವಿಕ ಎಂದು ವಿಂಗಡಿಸಿರುತ್ತಾರೆ. ಬೌದ್ಧ ಪ್ರತಿಮೆಗಳ ಬಗ್ಗೆ ನೀಡಿರುವ ವಿವರಣೆಗಳು ಸುಸ್ಪಷ್ಟ ಹಾಗೂ ಸಾಧಾರವಾಗಿವೆ. ಒಂದೇ ಹೆಸರಿದ್ದು ಬೇರೆ ಬೇರೆ ಧರ್ಮದವರು ಪೂಜಿಸುವ ಅಂಬಿಕೆ ಶಿಲ್ಪದ ಬಗ್ಗೆ ಹೆಚ್ಚಿನ ವಿವರಣೆ ನೀಡಿರುತ್ತಾರೆ.

ಆಂಧ್ರ ಪ್ರದೇಶ ಸರ್ಕಾರವು ಗಣಪತಿ ಸ್ಥಪತಿಗಳ ನೇತೃತ್ವದಲ್ಲಿ ಕೆಲವು ಗ್ರಂಥಗಳಲ್ಲಿ ಬರುವ ಧ್ಯಾನಶ್ಲೋಕಗಳನ್ನಾಧರಿಸಿ ರೇಖಾಚಿತ್ರಗಳ ಮೂಲಕ ವಿವರಿಸಲು ಪ್ರಯತ್ನಿಸಿರುವ ಪುಸ್ತಕಗಳನ್ನು ಹೊರತಂದಿದೆ. ಮೈಸೂರು ಅರಸ ಮುಮ್ಮಡಿಯವರ ಕಾಲದಲ್ಲಿ ಶ್ರೀತತ್ತ್ವನಿಧಿ ಎಂಬ ಗ್ರಂಥದಲ್ಲಿ ಇಂತಹ ಪ್ರಯತ್ನವಿದೆ. ಬಹುಭಾಷೆಗಳ ಜ್ಞಾನವಿರುವ ಲೇಖಕರು ಭಾರತೀಯ ಮೂರ್ತಿಶಿಲ್ಪದ ಬಗೆಗೆ ಹೆಚ್ಚಿನ ಅಧ್ಯಯನ ಮಾಡಿರುವವರಾಗಿ ಇಂತಹ ಗ್ರಂಥವನ್ನು ಹೊರತಂದಿರುತ್ತಾರೆ. ಭಾರತೀಯ ಮೂರ್ತಿಶಿಲ್ಪದ ಬಗೆಗೆ ಅಭ್ಯಾಸ ಮಾಡುವ ಅಥವಾ ಆಸಕ್ತಿ ತೋರುವ ಯಾರೇ ಆಗಲಿ ಈ ಗ್ರಂಥವನ್ನು ಗಮನಿಸದೆ ಮುಂದೆ ಹೋಗುವಂತಿಲ್ಲ. ಹೀಗಾಗಿ ಇದೊಂದು ಪ್ರಮುಖ ಆಕರ ಗ್ರಂಥವಾಗಿ ಉಳಿಯುವುದರಲ್ಲಿ ಸಂಶಯವಿಲ್ಲ.

**—ದೇವರ ಕೊಂಡಾರೆಡ್ಡಿ**

# ಮರುನ್ನಂದನ ಶತಕಂ

### ಕವಿ: ಆರ್. ತಾತಾ

ಶ್ರೀಮದನಂತಭೋಗ ನಿಳಯಾಂಘ್ರಿ ಸರೋರುಹ ಯುಗ್ಮಮೊಂದೆ ಭ
ಕ್ತ್ಯಾಮರ ಮರ್ತ್ಯನಾಗ ನಿವಹಕ್ಕೆ ಶಿವಂಕರಮಕ್ಕುಮೆಂದು ಪೂ
ರ್ಣ್ಯಾ ಮುನಿಬೃಂದಕಂದು ಪದಮಂ ಪದೆದಿತ್ತವೊಲಿಂದುಮಕ್ಕೆ ಬೋ
ಧಾಮಯನಬ್ಜಜಂ ಮಧುರವಾಣಿಯೊಳಿತ್ತುಪದೇಶಮೆಮ್ಮೊಳಂ ೧

ತನಗಂ ಪಂಚಾಸ್ಯದಿಂದಂ ಜಡಜಜನೆಣೆಯಾಯ್ತೆಂದು ಮಾತ್ಸರ್ಯದಿಂದಾ
ತನನಾಗಳ್ ನಾಲ್ಮೊಗಂ ಗೆಯ್ದು ಭವನನಜನಾಕ್ರೋಶದಿಂ ನೋಡಿ ಶುದ್ಧಾ
ತ್ಮನನಯ್ದುಂ ವಕ್ತ್ರದಿಂದಂ ಸೃಜಿಯಿಪ ಪದದೊಳ್ ಗಂಡಮಾರಕ್ತಮಾದ
ತ್ತೆನೆ ಕಣ್ಗೊಪ್ಪಿರ್ದನಾ ರಾಘವ ಪದಕಮಳೇಂದೀವರಂ ವಾಯುಪುತ್ರಂ ೨

ಪದಪಿಂ ಬೇರ್ಕೆಯ್ದು ತನ್ನಿಂ ತನುವನನುಪಮಶ್ರೀರಮಾವಲ್ಲಭ ಧ್ಯಾ
ನದೊಳಂ ದುರ್ಮೋಹ ದಾಹಕ್ಕೆಳಿಪದ ತನುವಂ ಗೆಲ್ವ ಪಂಚೇಂದ್ರಿಯಚ್ಛೇ
ದದೊಳಂ ವಿಕ್ರಾಂತದಿಂದಂ ಪುರದಹನದೊಳಂ ನಿರ್ಮಳಾಘೋರ ಪಂಚಾ
ಸ್ಯದೊಳಂ ಗಂಗಾಧರಂಗಂ ಮಿಗಿಲೆನಿಸಿದನೀ ರಾಮಪಾದಾಬ್ಜ ಭೃಂಗಂ ೩

ಮನದಿಂ ಮೇಣ್ ದಿಟ್ಟಿಯಿಂ ದಾಂಟುವೊಡರಿದೆನಿಪಂಭೋಧಿಯಂ ದಾಂಟಿ ಭೂಮೀ
ತನುಜಾತಾ ಶೋಕಮಂ ತೀರ್ಚಿದನಖಿಳದಿತೀಜವ್ರಜಂ ವಿಸ್ಮಯಂ ಗೊ
ಳ್ವಿನಮೊಂದೇ ಕೊಳ್ಳಿಯಿಂ ಲಂಕೆಯುಮನುರಿಪಿದಂ ಮತ್ತೆನಲ್ ರಾಘವಾಧೀ
ಶನ ಭೃತ್ಯಂ ದಾಂಟಿಸಲ್ಕಾಜನೆ ನೆನೆದೊಡೆ ಸಂಸಾರವಾರಾಶಿಯೊಂದಂ ೪

ವಿನತಾ ಪುತ್ರಂ ಗಡೀತಂ ರಘುವರಪದ ಕಂಜಾತಭೃಂಗಂ ಗಡೀತಂ
ದನುಜೇಂದ್ರಾರಾತಿಯೀತಂ ಗಡ ಪುರಹರನೇ ನೀಲಕಂಠಂ ಗಡೀತಂ
ಇನನೀತಂ ಭೀಮನೀತಂ ಪರಮಗುರುಗಡೀತಂ ದಿಟಂ ಕಲ್ಪಭೂಜಂ
ಹನುಮಂ ತಾನೆಂದೊಡೇಂ ದಾಂಟಿಸನೆ ನೆನೆಯೆ ಸಂಸಾರ ವಾರಾಶಿಯೊಂದಂ ೫

ತರುಣೀ ಸಂತಾನ ನಾನಾ ಕುಟಿಲವಚನ ಸಂದೋಹದಿಂದಂ ಕಿವುಂಡೆ
ಬಿದ್ದಿರೆ ಕಾಂತಾಕೂಟ ನೇತ್ರೋತ್ಪಲ ಸಮುದಯದಿಂ ಧ್ವಾಂತಮತ್ತೆತ್ತಲುಂ ಪ
ರ್ವಿರೆ ನಾರೀಬೃಂದದಾ ಬೇಟದಿನದವಟಲಿನ್ನಾಗೆ ಮುಂ ನೀಜಿರಂ ಸಂ
ಸರಣಾಂಭೋರಾಶಿಯಂ ದಾಂಟಿಸಿ ಪರಮಪದಕ್ಕುಯ್ಯನೇನಾಂಜನೇಯಂ ೬

ತರುಣೀ ಲಾವಣ್ಯ ನೀರಾಕರಮತಿಚಪಳಾನೇತ್ರ ಮೀನೋತ್ಕರಂ ದು
ರ್ಧರಮುದ್ಘೋರ್ಭಂಗ ಸಂಗಂ ಹೃದಯುಜನಿತಹಾಳಾಹಳಂ ಮತ್ಸರೌರ್ವಾ
ಕರಮೆಂಬಾ ಶಂಕೆಯಿಂದಂ ಕರಮಗಿವ ಮಹಾಭೀರುಮಂ ನಿನ್ನೆರಂ ಸಂ
ಸರಣಾಂಭೋರಾಶಿಯಂ ದಾಂಟಿಸಿ ಪರಮಪದಕ್ಕುಯ್ಯನೇನಾಂಜನೇಯಂ ೭

ಪರಮಾರ್ಥಂ ಪುತ್ರಹೀನಂಗರಿದೆನುತೊರೆವೊಂದುಕ್ತಿಯಂ ಕೇಳ್ದು ಚಿಂತಾ
ಭರದಿಂ ಕಣ್ಗೆಟ್ಟು ಬಾಯ್ವಿಟ್ಟಬುತದವಟಲಿಂ ದೇವಸಂತಾನಕೊಂದಾ
ದರದಿಂದಂ ಬೇಡಿಯುಂ ಮುಂ ಪಡೆಯದೆ ಪರಮಂ ಶೋಕಿಪಾ ಪಾಪಿಯುಂ ಸಂ
ಸರಣಾಂಭೋರಾಶಿಯಂ ದಾಂಟಿಸಿ ಪರಮಪದಕ್ಕಂಜನಾಸೂನುವುಯ್ಗುಂ ೮

ಧರೆಯೊಳ್ ತನ್ನಂತೆ ಪೆಂಪಂ ತಳೆದೊಡೆ ಪುರುಡಿಂ ಬಾಳ್ವರಾರಿರ್ದೊಡಂ ಮ
ಚ್ಚರಿಸುತ್ತುಂ ತನ್ನವೊಲ್ ಕಲ್ತೊಡೆ ಸಹಿಸದೆ ತನ್ನಂತೆ ಸದ್ಧರ್ಮದೊಂದಾ
ಚರಣಕ್ಕಂ ಕಾಯ್ದು ತನ್ನುನ್ನತಿಕೆಯೆ ಪಿರಿದೆಂದಾರ್ಪಹಂಕಾರಿಯುಂ ಸಂ
ಸರಣಾಂಭೋರಾಶಿಯಂ ದಾಂಟಿಸಿ ಪರಮಪದಕ್ಕಂಜನಾಸೂನುವುಯ್ಗುಂ ೯

ಬುಧಬೃಂದಂ ಕಂಡು ಕೊಂಡಾಡುತಮಿಪ ಗುಣಾಧಿಕ್ಯಮಂ ತೇಂಕೆ ಹರ್ಷಾಂ
ಬುಧಿಯೊಳ್ ತಾನಿತ್ತಲಾಜಿಂ ನೆಗಳೆಯನೊಳಕೊಂಡಯ್ದು ದಿಕ್ಕಂದೆ ನಾನಾ
ವಿಧ ಭಂಗಂ ಭಕ್ತನಾರ್ಪಂ ಕಿಡಿಸಿದೊಡೆ ಮರುನ್ನಂದನಂ ನೀಳ್ದ ಜನ್ಮಾಂ
ಬುಧಿ ಗರ್ತಾವರ್ತಕಾನೀಕದೆ ತೊಡರದವೋಲ್ ದಾಂಟಿಸಲ್ ಬಲ್ಲನೊರ್ವಂ ೧೦

ಕವಿತಂದತ್ತೆತ್ತಲುಂ ಕಟ್ಟಲೆಯೆನೆ ಮದಮತ್ತೇಭಮೆಟ್ಟೆಂದು ಧೈರ್ಯಾ
ಗಮನೇನುನ್ಮೂಲನಂ ಗೆಯ್ದಪುದೊ ನಿಜಪದಾಘಾತದಿಂ ಮಾನಸಾಂಭೋ
ಜಮನೇಂ ಧೂಳೀಪಟಂ ಗೆಯ್ದಪುದೊ ಎನೆ ಭಯಂ ಪುಟ್ಟಿಯುಂ ನೀಳ್ದ ಜನ್ಮಾ
ಟವಿಯಂ ಲಂಕಾಪುರಂಗೆತ್ತುರಿಪಲದಟಿನಿಂದಂಜನಾಸೂನು ಬಲ್ಲಂ ೧೧

ಭುವನಾಧೀಶಂಗೆ ರಾಜ್ಯಸ್ಪೃಹೆಯನಜಿತಮಂಗೆಗ್ಗನಾಪ್ತಂಗೆ ಪೈಶು
ನ್ಯವನಕ್ರೂರಂಗೆ ಕಾಠಿಣ್ಯವನನುಪಮ ಮಲ್ಲಂಗೆ ದುರ್ಭೀತಿಯಂ ಮಾ
ಸ್ತ್ರವ ಶೀಳಾಚಾರಯುಕ್ತಂಗವಿನಯಮನೊಡರ್ಚುತ್ತೆ ಕಾಡಿಪ್ಪ ಜನ್ಮಾ
ಟವಿಯಂ ಲಂಕಾಪುರಂಗೆತ್ತುರಿಪಲದಟಿನಿಂದಂಜನಾಸೂನು ಬಲ್ಲಂ ೧೨

ಅವಲೋಹಂ ಪೊರ್ದೆ ಪೊನ್ನಂ ಕುಮತಿ ಸುಮತಿಯಂ ಪೊರ್ದೆ ವಕ್ರತ್ವಮಂ ಶಾ
ರ್ಜವಮಂ ರಾಗಾತಿರೇಕಂ ವಿರತಿಯನಯಶಂ ಕೀರ್ತಿಯಂ ಕಿಲ್ಬಿಷಗ್ರಾ
ಮಮದೊಂಟುಂ ಸದ್ಗುಣಾನೀಕವನೆ ತೊಡರಲಾಭಾಸಮಪ್ಪೊಂದು ಜನ್ಮಾ
ಟವಿಯಂ ಲಂಕಾಪುರಂಗೆತ್ತುರಿಪಲವಟಿನಿಂದಂಜನಾಸೂನು ಬಲ್ಲಂ ೧೩

ರವಿಯಿಂ ಗಾಢಾಂಧಕಾರಂ ನಿಟಿಲನಯನನಿಂದಿಕ್ಷುಚಾಪಂ ಮಹೀಭೃ
ನ್ನಿಮಹಂ ಸೌಧರ್ಮನಿಂದಂ ದಶಶತಭುಜನಾ ರಾಮನಿಂದಂ ಘಟಪ್ರೋ
ದ್ಭವನಿಂ ವಾರಾಶಿ ತಾರ್ಕ್ಷ್ಯಾಧಿಪನಿನುರಗನಿಲ್ಲಕ್ಕುಮೆಂತಂತು ಜನ್ಮಾ
ಟವಿಯುಂ ಲಂಕಾಪುರೋದ್ಯಾನದವೋಲಳಿಯದೇನಂಜನಾಸೂನುವಿಂದಂ ॥ ೧೪

ರವಿಯುನ್ನಂ ಬ್ರಹ್ಮನನ್ನಂ ಕಮಳನಯನನನ್ನಂ ಪುರಧ್ವಂಸಿಯುನ್ನಂ
ಪವಿಯುನ್ನಂ ಚಕ್ರದನ್ನಂ ನರಹರಿನಖದನ್ನಂ ವಿರೂಪಾಕ್ಷಿಯುನ್ನಂ
ಶಿವೆಯುನ್ನಂ ವಾಣಿಯುನ್ನಂ ಮುನಿಪ ಮಹತಿಯುನ್ನಂ ಧನುರ್ವಾರ್ವಿಯುನ್ನಂ
ಭುವನಪ್ರಸ್ತುತ್ಯನೆಂದಂದನಿಲಸುತನನೇ ವರ್ಣ್ಣಿಪಂ ಬರ್ಣ್ಣಿಪಾತಂ ೧೬

ಗಿರಿಶಂಗಾದ್ರ್ಯಜ ನಾಮಂ ಸಮನಿಸಲಭವ ಖ್ಯಾತಿಯೆಂತಾದುದೆಂದೆಂ
ಬರ ಮಾತಂತಿರ್ಕ್ಕೆಯಾ ರೋಹಿಣಿಯೊಳಜಿತತೀರ್ಥೇಶ್ವರಂ ನಾಭಿಜಕ್ರೀ
ಶ್ವರನಿಂಮಂದುತ್ತರಾಷಾಢದೊಳುದಯಿಸಲಂತಾದಿನಾಥಂ ಬಲೀಕ್ಕೀ
ಶ್ವರನೆಂಬೊಂಗೆಂತಜನ್ಮಾಭಿಧಮೆನಲೊರೆವಾ ನಾಸ್ತಿಕಂ ಗಾವುದಾರ್ವಂ ೧೭

ವರದಂ ಚಂದ್ರಪ್ರಭಂ ರೋಹಿಣಿಯೊಳುದಯಿಸಲ್ ಲಕ್ಷ್ಮಣಾದೇವಿಗಂ ಶ್ರೀ
ವರನಂತಾ ರೋಹಿಣೀ ತಾರಕೆಯೊಳುದಯಿಸಲ್ ದೇವಕೀ ದೇವಿಗಂ ದೇ
ವರಿವರ್ಗಂ ಮತ್ತಜನ್ಮಾಭಿಧಮೊದವುಗುಮೆಂತೆಂದು ದೈವತ್ವಮಂ ಮಾಂ
ಕರಿಸಲ್ ಲೋಕೇಶ್ವರಾನ್ವೇಷಣದೊಳಗಟೀಗುಂ ವೀತ ಜನ್ಮೈಕಧರ್ಮಂ ೧೮

ಪರಮಂ ರಾಗಾದಿದೋಷಂಗಳನುಳಿದಿರೆ ಕಾಶ್ಮೀರ ರಾಗಂ ವೃಷಾಧೀ
ಶ್ವರನಂ ಶ್ರೇಯಾಂಸನಂ ಧರ್ಮನನಜಿತನನಾ ಶಾಂತಿತೀರ್ಥೇಶನಂ ಪೊ
ರ್ದಿರಲಂತಾ ವಾಸುಪೂಜ್ಯಂಗರುಣತೆ ದೊರೆಕೊಂಡತ್ತೆನಲ್ ವೀತರಾಗೇ
ಶ್ವರ ನಾಮಂ ಸಲ್ಲದೀಶಂಗೆನಲೊಡನಟೀಗುಂ ವೀತರಾಗೈಕ ಧರ್ಮಂ ೧೯

ಧವಳಾಂಗಂ ಪುಷ್ಪದಂತೇಶ್ವರನನುಪಮ ಚಂದ್ರಪ್ರಭಂ ಚಂದ್ರರೋಚಿ
ರ್ಧವಳಂ ಶ್ರೀಪದ್ಮರಾಗದ್ಯುತಿಗೆ ಪರಮ ಪದ್ಮಪ್ರಭಂ ಸಂದ ನೀಲ
ಚ್ಛವಿಗಂ ಶ್ರೀಮಲ್ಲಿನಾಥಂ ನೆಗಟೆಯಸಿತವರ್ಣಕ್ಕೆ ನೇಮೀಶನೆಂದೀ
ನೆವದಿಂದಂ ವೀತರಾಗಂ ಕಿಡುವೊಡೆ ಕಿಡದೇಂ ವೀತರಾಗೈಕಧರ್ಮಂ ೧೯

ಪರಮಶ್ರೇಯಾಂಸ ತೀರ್ಥಾವತರಣಕೆ ಪುರಂ ಸಿಂಹನಾದಾಂಕಿತಂ ಮು
ತ್ತರ ತೀರ್ಥೇಶಾಬ್ಜ ಮಿತ್ರೋದಯಕೆ ಗಜಪುರಂ ಶೀತಳಾಧೀಶತೀರ್ಥಂ
ಕರಜನ್ಮಸ್ಥಾನಕಂ ಭದ್ರಪುರಮೆ ನೆಗಟ್ದಿತ್ತೆಂದೆನಲ್ ವರ್ಧಮಾನಂ
ಬರಮಾರ್ಗೆಂತಂತೆ ಜನ್ಮಾಭಿಧಮೆನಲೊರೆವಾ ಧರ್ಮಮೇ ನಾಮಮಾಯ್ತೇ ೨೦

ಧರೆ ಚಂದ್ರಾರ್ಕ ಕರಾಂಕಿತಂ ಹರಜಟಾ ಜೂಟಾಂಕಿತಂ ನೀರಜೋ
ದರ ಚಕ್ರಾಂಕಿತ ಮಂಬುಜಾಸನ ಮಹಾದಂಡಾಂಕಿತಂ ಮೇಣ್ ಪುರಂ
ದರ ವಜ್ರಾಂಕಿತಮೆಂದೊಡಾಯ್ತು ಪಿರಿದಂ ಸಗ್ರ್ನಾಕದಿಂದಂ ದಿಗಂ
ಬರವಾದೀ ಜಗಮಾರ್ಗಮೇಂ ತಿಳಿಯದೇ ಜೈನೇಂದ್ರ ಮುದ್ರಾಂಕಿತಂ ೨೧

ಕ್ಷಿತಿಯುಂ ಪರ್ವಿದ ಪರ್ವನಿಕ್ಲಿನಿಪಿನಂ ದೇದೀಪ್ಯಮಾನಪ್ರಭಾ
ತತಿಯಿಂದಂ ದಿವಸೇಂದ್ರನುಂ ರಜನಿಯೊಳ್ ಶೀತಾಂಶುವಿಂದಂ ನಿಶಾ
ಪತಿಯುಂ ಪರ್ಚಿಸದಿರ್ದೊಡೆಂತುಟೊ ಜಗದ್ವ್ಯಾಪಾರಧರ್ಮಂ ದಿವಾಂ
ಧತೆಯುಂ ತೂಳ್ದಿದೊಡಲ್ತೆ ತಾನೆ ತಿಳಿಗುಂ ಸೂರ್ಯೇಂದು ಮುದ್ರಾಂಕಿತಂ ೨೨

ವಿತತೋಂಕಾರದವರ್ಣವಿಂದುವೆ ಗಡಂ ಮತ್ತಲ್ಲುಕಾರಂ ದಿವ
ಸ್ಪತಿಯಿನ್ನಗ್ನಿ ಮಕಾರಮೆಂದಿರೆ ಜಗದ್ವಿಖ್ಯಾತರಂ ಬಿಟ್ಟೊಡ
ಜ್ಞತೆಯಿಂ ಮಂತ್ರದ ಮೂಲಮಂ ಮಱತೊಡೆತ್ತಂ ಲೋಕಮಾಲೋಕ ಶೂ
ನ್ಯತೆಯಿಂದಿರ್ದೊಡೆ ಕಾಣಲಪ್ಪುದೆ ವಲಂ ಚಂದ್ರಾರ್ಕಮುದ್ರಾಂಕಿತಂ ೨೩

ಜಗದಾಲೋಕನದರ್ಪಣಂ ಗಡ ನಿಶಾನಾಥಂ ಜಗಚ್ಚಕ್ಷುವಾ
ಪಗಲಾಣ್ಮಂ ಗಡಮಗ್ನಿ ಪಾವಕನಿವರ್ ಶ್ರೀ ವ್ಯೋಮಕೇಶಂಗೆ ಚ
ಕ್ಷುಗಳಾದರ್ ಗಡಮೆಂದೊಡಂಬಡದೊಡಾ ಚಂದ್ರಾರ್ಕತಾರಂಬರಂ
ಜಗದೊಳ್ ಕಾಣ್ಬುದೆ ಪೇೞ್ ದಿವಾಂಧತೆಯಿನಿಂದ್ವರ್ಕಾಗ್ನಿ ರುದ್ರಾಂಕಿತಂ ೨೪

ಸಿತವರ್ಣಂ ನಿಜಪಾಂಚಜನ್ಯಮುಮಳಂ ಚಂದ್ರಂಬೊಲಾ ರಕ್ತವ
ರ್ಣತೆಯಿಂದೆಯ್ದೆ ಸುದರ್ಶನಂ ದಿನಕರಂಬೊಲ್ ಚಕ್ರಿಗಾಗಲ್ ಜಗ
ನ್ನುತ ಲಕ್ಷ್ಮೀಧರಮುದ್ರೆಯಂ ಮರೆತೊಡೆತ್ತಂ ಲೋಕಮಾಲೋಕಶೂ
ನ್ಯತೆಯಿಂದಿರ್ದೊಡೆ ಕಾಣಲಾರ್ಪುದೆ ವಲಂ ಶ್ರೀ ಶಂಖಚಕ್ರಾಂಕಿತಂ ೨೫

ವಿತತೋಂಕಾರದವರ್ಣಮಬ್ಜನಿಲಯಂ ಮತ್ತಲ್ಲುಕಾರಂ ರಮಾ
ಪತಿಯಾ ಶಂಭು ಮಕಾರಮೆಂದೆನೆ ಜಗದ್ವಿಖ್ಯಾತರಂ ಬಿಟ್ಟೊಡ
ಜ್ಞತೆಯಿಂ ಮಂತ್ರದ ಮೂಲಮಂ ಮಱತವಂಗಂಪೋನ್ನಮುಸ್ಸಿದ್ಧಿ ಶೂ
ನ್ಯತೆಯಿಂದಿರ್ದೊಡೆ ಕಾಣಲಾರ್ಪುದೆ ವಲಂ ತ್ರೈಮೂರ್ತಿ ಮುದ್ರಾಂಕಿತಂ ೨೬

ಸುರಚಾಪಂ ಮುಗಿಲೊಡ್ಡಣಂ ಬಱಸಿಡಿಲ್ ಬಾಳ್ಮಿಂಚೆವೆಲ್ಲಂ ವಸುಂ
ಧರೆಯೊಳ್ ರಾಗಿಗೆ ಭೋಗಮಸ್ಥಿರಮೆನುತ್ತುಂ ಸಾಱ ಪಂಚೇಂದ್ರಿಯೋ
ತ್ಕರಮಂ ಗೆಲ್ದು ವಿರಕ್ತಿಯಂ ಪಡೆವಿನಂ ಯೋಗೀಂದ್ರಬೃಂದಕ್ಕೆ ಪೂ
ರ್ಣೋದ್ದರೆಯಲ್ ಸಾಲದೆ ಲೋಕಕೇಂ ತಿಳಿಯದೇ ಸೌಧರ್ಮ ವಜ್ರಾಂಕಿತಂ ೨೭

ಶಿವನಂ ನಿಂದಿಸಿ ನಂದಿಯಂ ಪಱಿದು ರುದ್ರಾನೀಕನಿಂದಾ ವ್ರತೋ
ತ್ಸವದಿಂ ರುದ್ರಗಣಂಗಳಂ ಜಱೆದು ಗಂಗಾಸ್ನಾನಮಂ ಬಿಟ್ಟುಮಾ
ಧವಧಾಳಾಕ್ಷಿಯುಸಂಗಜಂಗೆ ಪೊಯೆ ನಂದಲ್ಕಿತ್ತೊಡೆನ್ನಂಗ ಶಾಂ
ಭವ ಧರ್ಮಂ ನೆರಮಾಗಿ ನಿಲ್ಕುಮೆ ವಲಂ ಸ್ವರ್ಗಾಪವರ್ಗಂಬರಂ ೨೮

ಮುನಿಬೃಂದಂ ಕಿವಿಯಿಂದಮೀಂಟಿ ತಣಿಗುಂ ರಾಮಾಮೃತಾಸಾರದಿಂ
ಜಿನೆಗಂ ವಿಷ್ಣುಸಹಸ್ರನಾಮಕೆ ಸಮಂ ಶ್ರೀರಾಮನಾಮಂ ವರಾ
ನನೆಯಿಂದದ್ರಿಜೆಗೀಶನೊಲ್ದೊರೆದನೆಂದಂದೀಶನಿಂದಾ ವ್ರತ
ಕ್ಕನಸುಂ ಪೂಣ್ದೊಡೆ ವಿಷ್ಣುಭಕ್ತಿ ನೆರಮೇಂ ಸ್ವರ್ಗಾಪವರ್ಗಂಬರಂ ೨೯

ಶಿವಭಕ್ತಿವ್ರತಮೊಂದನೊಲ್ದೊಡೆ ಶಿವಾನುಷ್ಠಾನಮಂ ಕೊಳ್ಗೆ ಕೇ
ಶವನಂ ನಿಂದಿಸಿ ಲಕ್ಷ್ಮಿಯುಂ ಜಱಿದು ನೇತ್ರಾಂಭೋಜಮಂ ಕಿಟ್ಟುವಾ
ಧವ ಪಾದಕ್ಕೆ ಸಮರ್ಪಿಸುತ್ತೊಲವಿನಿಂ ಶ್ರೀಶಂ ಕರಂ ಶಂಭುಸಂ
ಸ್ತವನಂಗೆಯ್ದುಪಮಾರ್ಜಮಾಯ್ತು ಶಿವಧರ್ಮಂ ಜನ್ಮಪಾರಂಬರಂ ೩೦

ಮರನಂ ಬಳ್ಳಿಯನಶ್ವಮಂ ವಿಹಗಮಂ ಮತ್ತೇಭಮಂ ಕಲ್ಲನು
ರ್ವರೆಯಂ ಕಾಟ್ಟುಜಮಂ ಬಯಲ್ದೊಱೆಯು ಬೆಳ್ಳಂ ಕಂಡು ಕೊಂಡಾಡೆ ಶಂ
ಕರ ಲಕ್ಷ್ಮೀಶ ತಥಾಗತಾಗ್ನಿ ಜಿನಪಾದಿತ್ಯೇಂದು ನಿಂದಾವ್ರತಾ
ಚರಣಂ ನೂತನದರ್ಶನಕ್ಕೆ ನೆರಮೇಂ ಸ್ವರ್ಗಾಪವರ್ಗಂಬರಂ ೩೧

ನರನೆನ್ನುಂ ನರಸಿಂಗನೆನ್ನು ಮುಱಿ ನಾರೀಸಂಗನೆನ್ನುಂ ದಿಗಂ
ಬರನೆನ್ನುಂ ಕೊಲೆಗೊಲ್ದನೆನ್ನು ಮೆನುತುಂ ದೇವರ್ಕಳಂ ನಿಂದಿಪೊಂ
ಗೊರೆಯಲ್ ತರ್ಕ್ಯಪದೇಶದಿಂದೆ ನಿಜಮಂ ಬೋಧೋದಯಕ್ಕೆಯ್ದೆ ಕೇ
ಸರಿಪುತ್ರಾಪ್ಸ್ವಯದಿಂದಮುದ್ಭವಿಸಿದಯ್ ಶ್ರೀಮನ್ಮರುನ್ನಂದನಾ ೩೨

ಆವೊಂ ವಿಷ್ಣು ದಿನೇಶರೊಳ್ ರವಿಯುದಾವಂ ಜ್ಯೋತಿ ರಂಗೌಘಕಿ
ನ್ನಾವಂ ವಾಯುಗಳೊಳ್ ಮರೀಚಿ ಶಶಿಯಾವಂ ತಾರಕಾನೀಕ ಕಿ
ನ್ನಾವಂ ವೇದಕೆ ಸಾಮವೇದಮಱಿಯಲ್ ಮತ್ತಾವನಾ ವಾಸವಂ
ದೇವವ್ರಾತದೆ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೩೩

ಆವಂ ಮಾನಸಮಿಂದ್ರಿಯೋತ್ಕರದೆ ಮತ್ತಂ ಪಂಚಭೂತಕ್ಕಮಿ
ನ್ನಾವಂ ಚೇತನನೆಯ್ದೆ ಶಂಕರನದಾವಂ ರುದ್ರರೊಳ್ ವಿತ್ತಪಂ
ಆವಂ ನೋೞ್ಪೊಡೆ ಯಕ್ಷರಕ್ಷಕುಲದೊಳ್ ಮತ್ತಂ ವಸುವ್ರಾತಕಿ
ನ್ನಾವಂ ಪಾವಕನೆಂದು ನೀಸರಿಪಿನಯ್ ಶ್ರೀಮನ್ಮರುನ್ನಂದನಾ ೩೪

ಆವಂ ನೋಡೆ ಪುರೋಹಿತರ್ಗೆ ಗುರುಮುಖ್ಯಂ ಭೂಧರವ್ರಾತಕಿ
ನ್ನಾವಂ ಮೇರುವಪಾರ ಸಾಗರದ ಸೇನಾನೀಕರೊಳ್ ಸ್ಕಂದನಿ
ನ್ನಾವಂ ತಾಂ ಋಷಿಮುಖ್ಯರೊಳ್ ಭೃಗು ಗಿರಾನೇಕಕ್ಕಮೇಕಾಕ್ಷರಂ
ದೇವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೩೫

ಆವಂ ಯಜ್ಞದೊಳೇಟಿಕ್ಕಿ ಪೆತ್ತ ಜಪಯಜ್ಞಂ ಸ್ಥಾವರಶ್ರೇಣಿಗಿ
ನ್ನಾವಂ ತಾಂ ಹಿಮವನ್ನಗಂ ನಿಖಿಲವೃಕ್ಷಾನೀಕಕಶ್ವತ್ಥಮಿ
ನ್ನಾವಂ ನಾರದ ನಾಮದಿಂದೆ ನೆಗಟ್ದಿಂ ದೇವರ್ಷಿ ಸಂದೋಹದೊಳ್
ದೇವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೩೬

ಆವಂ ಚಿತ್ರರಥಾಖ್ಯನೆಂದು ನೆಗಟ್ದಂ ಗಂಧರ್ವರೊಳ್ ಸಿದ್ಧರ
ಲ್ಲಾವಂ ತಾಂ ಕಪಿಲಾಖ್ಯನೆಂಬ ಮುನಿ ಮತ್ತುಚ್ಚೈಶ್ರವಂ ಕ್ಷೀರಪಾ
ರಾವಾರೋದ್ಭವಮಶ್ವಸಂಕುಳದೊಳಿನ್ನೈರಾವತಂ ದಂತಿಯೊಳ್
ದೇವಂ ತಾಂ ನರರೊಳ್ ನರೇಂದ್ರನೆನುತಂ ಪೇಳ್ದಿಯ್ ಮರುನ್ನಂದನಾ ? ೩೭

ಆವಂ ತಾಂ ಸಕಲಾಯುಧಕ್ಕೆ ನೆಗಟ್ದಾ ವಜ್ರಾಯುಧಂ ಕಾಮಧು
ಕ್ಕಾವಂ ಧೇನುಗಳೊಳ್ ವಲಂ ಪ್ರಜನರೊಳ್ ಕಂದರ್ಪನಾ ಸರ್ಪರೊಳ್
ಆವಂ ವಾಸುಕಿಯಿನ್ನನಂತನೆನಿಪಂ ನಾಗಾಳಿಯೊಳ್ ಯಾದಸ
ಕ್ಕಾವಂ ತಾಂ ವರುಣಾಖ್ಯನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೩೮

ಆವಂ ತಾಂ ಪಿತೃವರ್ಗಕರ್ಯಮನನೆಂಬೊಂ ತಾಂ ಯಮಂ ಮತ್ತಮಿ
ನ್ನಾವಂ ದಂಡಧರೇಶರೊಳ್ ವದಪಿನಿಂ ಪ್ರಹ್ಲಾದನಾ ದೈತ್ಯರೊಳ್
ಆವಂ ಲೆಕ್ಕಿಗರಲ್ಲಿ ಕಾಲನೆನಿಪಂ ಸಿಂಹಂ ಮೃಗವ್ರಾತಕಿ
ನ್ನಾವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೩೯

ಆವಂ ನೋಱಿಪ್ಪೊಡೆ ವೈನತೇಯನೆನಿಪಂ ಮತ್ತಂ ವಿಹಂಗಾಳಿಗಿ
ನ್ನಾವಂ ಸಂಚರಿಯಿಪ್ಪರೊಳ್ ಪವನನೆಂಬೊಂ ಶಸ್ತ್ರಹಸ್ತರ್ಕಳೊಳ್
ಆವಂ ರಾಮನೆನಿಪ್ಪವಂ ಮಕರಮಾವಂ ಮತ್ಸ್ಯಸಂದೋಹದೊಳ್
ದೇವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೦

ಆವಂ ಸ್ರೋತದೊಳೆಲ್ಲ ಜಾಹ್ನವಿ ವಲಂ ತಾನಾದಿಮಧ್ಯಾಂತಮಿ
ನ್ನಾವಂ ಸೃಷ್ಟಿಗೆ ವಿದ್ಯೆಯೊಳ್ ನೆಗಟ್ದ ತಾನಧ್ಯಾತ್ಮಕಂ ಮತ್ತಮಿ
ನ್ನಾವಂ ವಾದಿಗಳೊಂದು ವಾದದೊಳಗಾ ವಾದಕ್ಕೆ ವಾದಂ ದಲಿ
ನ್ನಾವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೧

ಆವಂ ಮತ್ತೆಯುಮಕ್ಷರಾವಳಿಗಕಾರಂ ದ್ವಂದ್ವಮೊಂದೆಂಬನಿ
ನ್ನಾವಂ ತಾಂ ದಿಟದಿಂ ಸಮಾಸತತಿಯೊಳ್ ಕಾಲಂಗಳೊಳ್ ಮತ್ತಮಿ
ನ್ನಾವಂ ಲೆಕ್ಕಿಪೊಡಕ್ಷಯಂ ದೆಸೆಗಳೆಲ್ಲಕ್ಕಂ ಮೊಗಂಗೊಂಡನಿ
ನ್ನಾವಂ ಧಾತೃವೆನುತ್ತುಮೊಲ್ದಱಿಪಿದಯ್ ಶ್ರೀಮನ್ಮರುನ್ನಂದನಾ ೪೨

ಆವಂ ಸರ್ವಚರಂಗೆ ಮೃತ್ಯುವೆನಿಪಂ ಮುಂ ಪುಟ್ಟಲಿರ್ಪರ್ಗವಿ
ನ್ನಾವಂ ಪುಟ್ಟು ಧೃತಿ ಸ್ಮೃತಿ ಕ್ಷಮೆಗಳಾಮೇಧಸ್ಸುಮಾ ಕೀರ್ತಿಯಾ
ಶ್ರೀ ವಾಣೀ ಪ್ರಮುಖಾಭಿಧಾನದೆಸೆವಾ ನಾರೀನಿಕಾಯಕ್ಕವಿ
ನ್ನಾವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೩

ಆವಂ ಸಾಮದೊಳಂ ಬೃಹತ್ಸು ನೆಗಳ್ದಾ ಗಾಯತ್ರಿ ಛಂದಸ್ಸಿನ
ಲ್ಲಾವಂ ಸಾಕಲಮಾಸದಲ್ಲಿ ದೊರೆವೆತ್ತಾ ಮಾರ್ಗಶೀರ್ಷಂ ದಲಿ
ನ್ನಾವಂ ತಾಂ ಕುಸುಮಾಕರಂ ಋತುಗಳೊಳ್ ನೋಡಲ್ಕೆ ಮತ್ತಾವನಿ
ನ್ನಾವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೪

ಆವಂ ಕೆಯ್ತವದಲ್ಲಿ ಜೂದವೆನಿಪಂ ತೇಜಸ್ವಿಯೊಳ್ ತೇಜವಿ
ನ್ನಾವಂ ಗೆಲ್ವವರಲ್ಲಿ ಗೆಲ್ಲಮೆನಿಸುಂ ಬೇಸಾಯಿಗರ್ಗಾವನಿ
ನ್ನಾವಂ ಬೇಪಸಮೆಯ್ದಿ ಸಾತ್ವಿಕರೊಳಂ ಸತ್ವಂ ದಲಿನ್ನಾವನಿ
ನ್ನಾವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೫

ಆವಂ ಯಾದವ ಬೃಂದದಲ್ಲಿ ನೆಗಳ್ದಾ ಶ್ರೀವಾಸುದೇವಂ ದಲಿ
ನ್ನಾವಂ ಪಾಂಡವರೊಳ್ ಧನಂಜಯನೆನಿಕ್ಕುಂ ಮೌನಿವರ್ಗಕ್ಕವಿ
ನ್ನಾವಂ ವ್ಯಾಸಮುನೀಂದ್ರನಾ ಕವಿಗಳೊಳ್ ಶುಕ್ರಾಖ್ಯನಿನ್ನಾವನಿ
ನ್ನಾವಂ ದೇವರೆ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೬

ಆವಂ ದಂಡಿಪರಲ್ಲಿ ದಂಡಮೆನಿಕುಂ ಮುಂ ಗೆಲ್ಲಕಾಟಿಪ್ಪರ
ಲ್ಲಾವಂ ನೀತಿಯೆನಿಕ್ಕುಮಿನ್ನಱಿಯಲಾವಂ ಮೌನಮಾ ಗುಹ್ಯದೊಳ್
ಆವಂ ಜ್ಞಾನಮನೊಂದಿದರ್ಗೆ ನೆಗಳ್ದಾ ಜ್ಞಾನಂ ದಲಿನ್ನಾವನಿ
ನ್ನಾವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೭

ಆವಂ ಸಾಕಲಭೂತಸಂತತಿಗೆ ಬೀಜಂ ತಾನೆನಿಕ್ಕುಂ ದಲಿ
ನ್ನಾವಂ ತಾಂ ಪೊಱಗಾಗಿರಲ್ ಜಗದೊಳಿತ್ತಂ ಜಂಗಮಸ್ಥಾವರಂ
ತಾಪ್ಪೊಂದುಂ ತಲೆದೋಱದಿರ್ಕುಮದಱಿಂ ತಾವಿಪ್ಪರ್ವೇಂ ದೇವ ಪೇೞ್
ದೇವಂ ದೇವರ ದೇವನೆಂದಱಿಪಿದಯ್ ಶ್ರೀಮನ್ಮರುನ್ನಂದನಾ ೪೮

ಕೊಲಲೆಂಬೊಂದುಪದೇಶಮುಂಟೆ ಕಳಲೆಂದಾಚಾರಮೊಂದುಂಟೆ ನಾ
ಣಿಲಿಪಾಗಸ್ತ್ಯಪರಿಗ್ರಹಕ್ಕೆಳಸಲೆಂಬೀ ಬೋಧೆಯೊಂದುಂಟೆ ಸೊ
ಲ್ಲಲಸತ್ಯಕ್ಕೆಡೆಗೊಟ್ಟರುಂಟೆ ಮತದೊಳ್ ತೃಷ್ಣಾಸರಿತ್ಸಂಗದಿಂ
ಪೊಲೆಯುಂ ಮಾನವನಕ್ಕುಮೆನ್ನದ ಮತಂ ತಾನಾವುದೋ ಮಾರುತೀ ೪೯

ಸಮಯಂಗಳ್ ಪಲವಲ್ಲಿ ತನ್ನ ಸಮಯಂ ತಕ್ಕಂಗೆ ತಾಂ ತಕ್ಕುದು
ತ್ತಮವರ್ಣಾಶ್ರಮಧರ್ಮದಿಂದುಚಿತಭಾಷಾವೇಷನಾದಂದು ಪೊ
ಲ್ಲಮೆಯೊಂದುಂ ತಱಿಸಂದೊಡನ್ಯಮತದೊಳ್ ಸ್ವರ್ಗಾಪವರ್ಗಕ್ಕೆ ಸ
ಲ್ಗುಮೆ ಪೇಳ್ ಶೀಘ್ರದೊಳಡ್ಡಬರ್ಪುದೆ ವಲಂ ತದ್ಧರ್ಮಲೋಭೋದಯಂ ೫೦

ತರದಿಂದಂ ವಿಶ್ವವೇದಂಗಳನಱಿತು ಭವಾಂಭೋಧಿಯಂ ದಾಂಟಿ ಪೂರ್ವಾ
ಪರವೈರುದ್ಧ್ಯಂಗಳಂ ಮಾಣ್ದುಪಶಮವಶಂ ನಿಷ್ಕಳಂಕಂ ಗುಣೌಘಾ
ಕರನಾದಂ ಸಾಧುವಂದ್ಯಂ ವಿದಳಿತಕಲುಷಂ ವಂದ್ಯನಾತಂ ಭವಾನೀ
ವರನಕ್ಕು ಶ್ರೀಧರಂ ಮೇಣ್ ಕಮಳನಿಳಯನಾ ಬುದ್ಧನಾ ವರ್ಧಮಾನಂ ೫೧

ಮುಗುಲಂ ಬೇಱಿಸಿ ಪಾತು ಬೇಱಿಸಿ ಶಿರಂ ಬೋಳಾಗೆ ಬೋಳಾಗೆ ಧ
ಗ್ಗಗೆನುತ್ತುಂ ಪೊಗೆತರ್ಪ ಬಾಲಕಕುಲಕ್ಕಂ ತಮ್ಮ ವರ್ಣಾಶ್ರಮಾ
ದಿಗಳಂ ಧರ್ಮವನೊಲ್ದು ಪೇೞುವೊಪಜಗ್ಗಂ ಕೇವಲಂ ಜನ್ಮಹೇ
ತುಗಳಪ್ಪ ಪಿತೃಗಳ್ಗಮೇಂ ವಿರತಿಯೋ ಮೇಣ್ ಮೋಹಮೋ ಮಾರುತೀ ೫೨

ಅಪಗಂ ತಿಂದೊಡೆ ಜಾತಿಪೋದುದೆನುತಂ ಪೇೞ್ವರ್ ಕೆಲರ್ ಮತ್ತೆ ಕೇ
ಳ್ದೊಡೆ ಮಾಂಸಾನ್ನವನೊಲ್ಲೆವೆಂಬರರೆಬರ್ ನಿರ್ಮಾಂಸಿಯೊಳ್ಕೂಡಿ ಸಂ
ಗಡಮುಣ್ಬಂತುಟೆಯಾಗೆ ಧರ್ಮಮೞಿದತ್ತೆಂದೆಂಬುದಂತಿರ್ಕೆ ಕೋ
ಡಿಡಲಾರ್ಗಾರೊಳಮಕ್ಕುಮೇಂ ನಿಜಮತಾಚಾರವ್ರತಾಭಾವದಿಂ ೫೩

ಕುಲಧರ್ಮಕ್ಕೆ ವಿರೋಧಮೆಂದಱಿತೊಡಂ ಕಳ್ಳುಂಡ ಕಳ್ಳರ್ಕಳೊಳ್
ಪಲಬರ್ ತಮ್ಮವರೊಳ್ ಕರಂ ನಟಿಯಿಪರ್ ಸದ್ಧರ್ಮಮಂ ಕಳ್ವೆವೆಂ
ದುಲಿವರ್ ಮತ್ತೆ ಪಲಂಬರಾರಿವರೊಳಾಚಾರಕ್ಕೆ ತಕ್ಕರ್ ನಿರಾ
ಕುಲಮೆಂದೆಂಬುದನೀಗಳೆಂತಱಿಯಲಕ್ಕುಂ ಪ್ರಾಕೃತಾಚಾರದೊಳ್ ೫೪

ಪುಸಿಪೊಂಗೇಕೆ ಕುಲವ್ರತಾಚರಣೆ ಧರ್ಮಜ್ಞಾನವೆಂದಂದು ಹಿಂ
ಸಿಸುಪೊಂಗಂ ಕುಡಿಪೊಂಗಮನ್ಯವನಿತಾರಕ್ತಂಗಮೋರಂತೆ ವಂ
ಚಿಸುಪೊಂಗಂ ನೆಱಿ ತೃಷ್ಣೆಯೊಳ್ ಕುದಿದು ಬಿಟ್ಟಿರ್ದಂಗಂ ನೃಪದ್ರೋಹಕಾ
ಟಿಸುಪೊಂಗಂ ಕುಲಮೆಲ್ಲಿತಾರ್ಯಗುರುವಾಕ್ಯೋಲ್ಲಂಘನಾಚರ್ಯೆಯೊಳ್ ೫೫

ಭಯದಿಂ ಭಕ್ತಿಯಿನಾರ್ತಸೇವನೆಯಿನಾದಂ ಜೀವನೋಪಾಯಮಂ
ನಯಮಂ ಜ್ಞಾನವನಾರ್ಯಧರ್ಮದಿರವಂ ಶಾಸ್ತ್ರಂಗಳಂ ನಾಡೆ ವಾ
ಚ್ಛಿಯುಮಂ ಶೌಚವನಣ್ಮನಾರ್ಪನೊವಜಂ ಪೇೞ್ವನ್ನೆಗಂ ಕಲ್ವ ಶಾ
ಲೆಯ ವಿದ್ಯಾರ್ಥಿಗೆ ರಾಜನೀತಿಯೊಳಗೇಂ ಸಂದೇಹಮುಂ ದ್ರೋಹಮುಂ ೫೬

ಗುರು ದೈವಂ ಪತಿ ದೈವಮಾಳ್ವರಸನೇ ದೈವಂ ಪ್ರಜಾ ದೈವಮೆಂ
ದಿರೆ ಶಿಷ್ಯಂಗೆ ಲತಾಂಗಿಗಂ ಪ್ರಜೆಗೆ ರಾಜಂಗಾರ್ಯಧರ್ಮೋಕ್ತಿ ದೇ
ವರನಿಲ್ಲೆಂಬುದಿನಿತ್ತುಮೇಂ ನೆನೆವರೇನಾಚಾರ್ಯನಂ ಮಂಡಳೇ
ಶ್ವರನಂ ಭರ್ತನನೋಜನಂ ಪಡೆದ ಸಮ್ಯಗ್ದರ್ಶನಜ್ಞಾನದಿಂ ೫೭

ಪೆಱನೊರ್ವಂ ಭವದಾಗಮಂಗಳನೊಱಲ್ದಾರಯ್ದವಷ್ಟಂಭದಿಂ
ವಱನಿಂತಿಂತುಟು ಕರ್ಮವಿಂತಿದು ಮತಾಚಾರಂ ಪರಬ್ರಹ್ಮನಾ
ತೆಱನಿಂತೆಂದೊರೆದಂದು ತನ್ನ ಮತದೊಳ್ ವಿಶ್ವಾಸಮುಂಟಾದೊಡಂ
ದಱಿಂತಂತಾಗದೆ ತನ್ನ ತಂದೆಯಿರವಂ ತಾನೋರ್ವನಿನ್ನೋರ್ವನಿಂ ೫೮

ಕೊಱೆ ನಾಱುತ್ತಿರೆ ಶುದ್ಧವಸ್ತುವದಱಾ ಸಂಯೋಗದಿಂದಂ ಕರಂ
ಪ್ರಱಿತಂತೇತಕೆ ಧರ್ಮಹೀನರೊಡನಾಟಂ ಮಾನವರ್ಗೇತಕೆ
ನ್ನಱಿವಂತಾ ಪಱಿಕೆಯ್ದು ತೊೞ್ತುನುಱಿಯರ್ ಧರ್ಮಕ್ಕೆ ಮೆಯ್ದ್ವಾರದಂ
ಜಱಿಗಳ್ ಧರ್ಮವಿರೋಧಿಯುಂ ನವಸಪ್ರೋದ್ಯದ್ದರ್ಶನ ಜ್ಞಾನಿಯುಂ ೫೯

ಮೃಗಹಿಂಸಾವ್ಯಸನಕ್ಕೆ ನೋಂತು ವನಮುಂ ನೀಱಿ(ರ)ಪ್ಪಿನಂ ಸುಟ್ಟುತಿಂ
ದುಗುಮಾ ರಕ್ತಮನೀಂಟಿ ಸಾಲದೆ ಪರವ್ಯಾಪಾರಿಯಿಂ ಕೊಂಡು ನೆ
ಟ್ಟಗೆ ತಿಂದೀಂಟುವ ಧಾರ್ಮಿಕರ್ ನಿರುಪಮೋಪಾಧ್ಯಾಯು ಸದ್ಬೋಧೆಯೊಂ
ದೊಗೆದಂತೀಗಳದೇಕೆ ಜೀವದಯೆ ಎಂಬೀ ನೋಂಪಿಯುಂ ನೋಂತರೋ ೬೦

ಧನಿಕಂ ಧಾರ್ಮಿಕನೆಂದು ಯಾಚಿಸಲೊಡಂ ಧರ್ಮಕ್ಕೆ ಮೆಯ್ದ್ವಾರದಂ
ಗೆನಸುಂ ಕೊಳ್ಕೊಡೆಯುಲ್ಲಿ ಶೀಲಗುಣಸಂಪನ್ನಂಗೆ ಯೋಗ್ಯಂಗೆ ಸ
ಜ್ಜನಮಿತ್ರಂಗೆ ತನೂಜೆಯಂ ಕುಡದಯೋಗ್ಯಂಗೀಯಲಾರಯ್ದು ಕಾಂ
ಚನವರ್ಷಂ ಕಱೆದಲ್ಲದೇನೆಱೆವುದೇ ವೈವಾಹಧಾರಾಂಬುವಂ ೬೧

ಕಿಱಿದಾನುಂ ಕಲಿಗಲ್ತು ಜಾತಿಗುಚಿತವ್ಯಾಪಾರಮಂ ಬಿಟ್ಟು ತ
ಕ್ಕಱಿನಂ ಕಾಣದ ತಮ್ಮ ನಚ್ಚಿನಣುಗಂಗಂ ಕನ್ನೆಯಂ ಕೊಟ್ಟುಮಿ
ನ್ನಱುದಿಂಗಳ್ಗೆ ಸಹಸ್ರಮೀಗಳೊಡನಂತಿಚ್ಛಾಸಿರಂ ಕಾಂಚನಂ
ಕಱೆದಂದಲ್ಲದೆ ಸಲ್ಲದೆಂಬುದೆ ವಿವಾಹಂ ನವ್ಯಧರ್ಮೋಕ್ತಿಯೊಳ್ ೬೨

ಅನಿತಂ ಕೊಟ್ಟೊಡೆ ಕೂಡೆ ಮಾಱಿದ ಸುತಂ ದಾಯಾದನಲ್ಲಿಂ ಬಱಿ
ಕ್ಕನುಮಿಂ ತಂದೆಗೆ ತಾಯ್ಗೆ ತನ್ನ ಜನಕಂ ದುರ್ಮೋಹದಿಂದಂ ಪಲಾ
ಯನಮಂ ಸೊಲ್ಲಿಸಿಯಂತರಂಗಸುಖದೊಳ್ ಕೈಲಾಸನಾಥಂಬೊಲಾ
ವನಜಾಕ್ಷಂಬೊಲನಂತವೈಭವದೆ ಬಾೞ್ಗಿಂ ಪ್ರಾಕೃತಾಚಾರದಿಂ ೬೩

ಅದುಮಂತಲ್ಲದೊಡುತ್ತಮಾನ್ವಯದ ಪೆಣ್ಣಂ ಕೊಳ್ಳಲೇತಾನುಮೊ
ಲ್ಲದೆ ರಂಡಾಂಗನೆಗೊಲ್ವೆನೆಂದು ಪದೆಪಿಂದಂ ಡಂಗುರಂಬೊಯ್ವ ಧ
ರ್ಮದ ವೈವಾಹಮಿದಾಗಮೋಕ್ತಮೆನುತುಂ ಕಯ್ಕೊಂಡಪುತ್ರಂಗೞ
ಲ್ವದೊ ಮೇಣ್ ಜಾತಿಗೞಲ್ವದೋ ಸೊಸೆಯು ಗಂಡಂಗೞ್ವದೋ ಬಾೞ್ವದೋ॥

ನಡೆಯೊಳ್ ನೋಟದೊಳೞ್ತಿಯೊಳ್ ಕಿನಿಸಿನೊಳ್ ವೈವಾಹದೊಳ್ ಸಾಪಿನೊಳ್
ನುಡಿಯೊಳ್ ವಿದ್ಯೆಯೊಳಾರ್ಜನೊಳ್ ಕಡುಪಿನೊಳ್ ಸಂಭೋಗದೊಳ್ ಜಾಗದೊಳ್
ಕುಡಿಯೊಳ್ ನೋಂಪಿಯೊಳೂಟದೊಳ್ ಪರಮತಾಚಾರ್ಯೋಕ್ತಿಯಿಂತಂತೆ ಸ
ಲ್ವೊಡೆ ನಮ್ಮಾಗಮಸೂತ್ರಕಿನ್ನೊರೆವುದೇಂ ಮತ್ತಂ ಬಹಿಷ್ಕೀಕೆಯಂ ೬೫

ಜಿನವರ ಧರ್ಮಮಾರ್ಗಮಿದುಮಂಗಕ್ಕುಮೆ ಮತ್ತಿನ ಮಾರ್ಗದೊಳ್ ಬಯ
ಲ್ದೊಡೞಿಯೊ ದವಾಗ್ನಿಯೋ ಪುಲಿಯೊ ಸಿಂಗಮೊ ಬಿಳ್ಗಮೊ ಕಾಳಕೂಟಮೋ
ಅೞಿಯದೆ ಜನ್ಮಕಾನನದೆ ಬಿಮ್ಮನೆ ಕಣ್ಗೆಡೆ ರಾಜಮಾರ್ಗಮಂ
ಮಱೆತೊಡೆ ದೇವ ನಿನ್ನ ಶರಣಾಗತರೇಂ ಭವಭೀತರಾಗರೇ ೬೬

ನಡೆನುಡಿ ಕಮ್ಮಿತಪ್ಪ ನಿಡುನಾಡಿನ ಕನ್ನಡಿಯಂತೆ ಸಲ್ವ ಕ
ನ್ನಡನುಡಿಗೊಲ್ದು ಕಲ್ಲದ ಕೆಲರ್ ಕರಿದಾದುದು ನಾಡು ನಾಡೆ ಕ
ರ್ನಡಮೆನೆ ಕಱ್ತಿನಲ್ ಪಿರಿದು ಕಬ್ಬಲಿಯೆಂಬುದೆ ಅರ್ಥಮಾಯ್ತು ಕ
ರ್ನಡಮದುಮಂಧದೇಶಮೆನುತಂಧಕವಾದಿಗಳೇಕೆ ಮುಯ್ವರೋ ೬೭

ಅಱವಮೆನಿತ್ತು ಕನ್ನಡಮೆನಿತ್ತು ತೆಲುಂಗೆನಿತೆಂದು ಕಲ್ಲದಂ
ಗಱಿವುದು ಸಾಧ್ಯಮೇಂ ದ್ರಮಿಡಕೂಟದ ಸಕ್ಕದಪಾಗದಂಗಳಂ
ತಿಱಿಕೊಱೆಗೊಂಡು ಭಾಷೆಗೆ ಮೊದಲ್ತುದಿಯಂ ವಿಧಿಸಲ್ಕೆ ಬರ್ಪುದೇ
ತಱ ನುಡಿಯೆನ್ನವೇಡಶನಿಯಂ ಮುೞಿಯಂ ಪಡೆವಂ ರಜೋಧಿಕಂ ೬೮

ಕೆೞವರನಿಂದು ನಿಂದಿಸುವ ಕಾಲಮೆ ಅಪ್ಪುದೞಿಂ ಕುಳಕ್ಷಳಂ
ಜೞಮಿವನೇಕೆ ಲೆಕ್ಕಿಪುದೊ ಕಾವ್ಯದೊಳೆಂದಿರಲೂರ ಪುಷ್ಕರಂ
ಘೞಿಲನೆ ಸಿಂಗಮಾರ್ದು ಜೞಮಂ ಪೊರೆಯುಲ್ ತಱಿಸಂದು ನೀತಿಯಂ
ಪೞಬರ ರೀತಿಯಿಂದೊರೆದುದೆಂಬುದಿದೆತ್ತಣರಣ್ಯರೋದನಂ ೬೯

ನುಡಿಗಲಿಸುತ್ತೆ ಮಾರ್ಗವಿದರೊಪ್ಪುವಿನಂ ಕೃತಿಪೇೞ್ದು ಮತ್ತರಿ
ಟ್ವಡಿಗಡಿಯಿಟ್ಟುಪೋಗೆ ಕೃತಿಯೇನಿರ್ದಗೊಳ್ಳದೆ ಸಾರದಿಂದೆ ಕ
ನ್ನಡನುಡಿಯಂ ದ್ವಿಷಂ ಕದಡುವಂತಿರಲಂಬುಜಷಂಡಮಂ ಪದಂ
ಗಿಡಿಸಿದ ಮತ್ತಿನನ್ಯಪದಘಾತದ ಪದ್ಧತಿಯೊಪ್ಪಲಾರ್ಕುಮೋ ೭೦

ಕವಿತೆಯೊಳಾದಿಪಂಪನ ಱೞಂ ಕವಿರನ್ನನ ರೇಫೆ ನೇಮಿಚಂ
ದ್ರವಿದಿತಪ್ರೋಲಪಾಲ್ಯಕವಿಯಾ ಶಿಥಿಲಾಕ್ಷರಮಂತೆ ರುದ್ರನಾ
ಸವಗೆಯುಮಿಂತಿವೆಲ್ಲಮುಮನೋದಿದ ಪಾತಕಬೃಂದಮೆಯ್ದೆ ಕೇ
ಶವಕವಿಮಾರ್ಗಮಂ ವಿಜಯಮಾರ್ಗಮನೇಂ ಶಿವಮಾರ್ಗಮೆಂಬರೇ ೨೧

ಅೞಿದುದು ಮುತ್ತರಿಂದೆ ಕೊೞಿ ಸಕ್ಕದದಿಂ ಪೞಗನ್ನಡಂ ಗಡಿ
ನ್ನುೞಿದೊಡೆ ಬಾೞ್ಗೆಮೆಂದುೞಿದು ಸಕ್ಕದಮಂ ಪೊಸಗನ್ನಡಕ್ಕೆ ನ
ಲ್ಪೞಿಯೊಳೆ ನಾಡನಾಡ ನುಡಿಯಂ ಪೊಸದೇಸಿಯೊಳಿಕ್ಕಿದಂದು ಕೇಳ್
ಪೞಿಗೆಡೆಯಕ್ಕುಮೆಂದು ಪೊಸಗನ್ನಡಮಂ ಬಳೆಪರ್ ಕವೀಶ್ವರರ್ ೨೨

ಶಿವಮಯಮಾದ ಪಂಚಪದಮಂ ನೆನೆದುನ್ನತ ಸಿದ್ಧಸಾಧುಸಂ
ಸ್ತವನವನೊಲ್ದೊಡರ್ಜಿ ಕವಿಕೇಶಿಯ ಪೇೞ್ದ ಸುಮಾರ್ಗದಿಂದಮ
ರ್ಣವವೃತಧಾತ್ರಿಯೊಳ್ ನೆಗೞ್ದ ಶುದ್ಧಗೆಯಂ ಸಹಳಕ್ಷಱೈತಿಯೆಂ
ದೊಪಜರುಮೀಗಳುಂ ಒರೆದು ಸುಟ್ಟರದೇಕೆಯೊ ಮಾರುತಾತ್ಮಜಾ । ೨೩

ಪೞಬರ ನೋಂಪಿಯಾ ಱೞಕುಳಕ್ಷಳಮುಂ ವರ ಱತ್ವರೇಫೆಯುಂ
ಪೞಿಗೆಡೆಯಪ್ಪ ಪಂಚಪದಮೆಂದುಱೆ ಮುತ್ತರ ಸಂದ ಮಾರ್ಗಮಂ
ಪೞವಿನ ಬಟ್ಟೆಯೆಂದುೞಿದು ನೆಟ್ಟನೆ ಬಾಂಬರಮೋಱೆ ಬಟ್ಟೆಯಂ
ಬೞಿಕೆ ಜರತ್ತೃಣಾನುಗುಣಮೆಂದೊಡೆ ಕೇಶವನಿಂದಮಪ್ಪುದೇಂ ೨೪

ಕವಿತೆಗೆ ಕಾರಣಂ ಪರಿಚಯಂ ಪೞಕಂ ಪ್ರತಿಭಾತಿಯೋಗಮೆಂ
ಬಿವೆ ನಿಜದಿಂದೆ ಮೂಱುಗುಣದಿಂ ಕೃತಿಯುತ್ಕೃತಿಯಪ್ಪುದಾದೊಡಂ
ತವಱೊಳಗೊಂದುಮಿಲ್ಲದೆ ವಲಂ ಕೃತಿಗೊಲ್ದೆನೆನ್ನ ದುಷ್ಕೃತ
ಕ್ಕವಗುಣಮೊಂದೆಯಪ್ಪೊಡೆ ಪರಾಭವಮಾಗದೆ ಮಾರುತಾತ್ಮಜಾ ೨೫

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂ
ಬಿವೆಯಿಮವಱೊಳ್ ಚಮತ್ಕೃತಿಯಿನರ್ಥದ ಲಾಭಮುಮುನ್ನತಿಕ್ಕೆಯಿಂ
ದೆ ವಿಶದಕೀರ್ತಿಯುಂ ನೆಗೞ್ಗೆ ಮೋಜೆಯುಮಿಲ್ಲದೆ ಪೂಜೆಯೆಂತು ಸಂ
ಭವಿಸುಗುಮೆನ್ನ ಪೂಣ್ದ ಕೃತಿಗಂ ನಿನಗಂ ಪವಮಾನನಂದನಾ ೨೬

ಪೞಬರ ರೀತಿಯಲ್ಲಿದು ಪೊಸಂಬರ ಮಾರ್ಗಮುಮಲ್ಲದೇತಕೀ
ಗೞಹುವ ಕಬ್ಬಮೀ ಸೊರಹುಮೀ ಱೞದಾಕುಳಮೊಪ್ಪಮಿಲ್ಲದೀ
ಪೞಿಗೆಡೆಯಪ್ಪುದೇಕೆ ಕೃತಿಗಳ್ ಪಲವಿರ್ದಪುವಲ್ತೆ ಮುನ್ನಮೆಂ
ದುೞಿದೊಡೆ ನಿಂದೆಯೋ ಎನಗೆ ಪೇೞ್ ಸ್ತುತಿಯೋ ಪವಮಾನನಂದನಾ ೨೭

ವಿನುತ ಸಮಂತಭದ್ರಕವಿಯೋ ಪರಮೇಷ್ಠಿಯೊ ಪೂಜ್ಯಪಾದದೇ
ವನೆ ಜಸದಲ್ಲಿ ಭಾರವಿಯ ಕಾವ್ಯಕೆ ಟೀಕೆಯನಿತ್ತ ದುರ್ವಿನೀ
ತನೆ ತಱಿಸಂದು ಶಾರದೆಯನೇಂ ತುದಿನಾಲಗೆಗಿಟ್ಟ ವರ್ಧದೇ
ವನೆ ಕವಿಮಾರ್ಗದೊಳ್ ವಿಜಯದೇವರೆ ಮೇಣಿವರಾವ ಕಬ್ಬಿಗರ್ ೭೮

ಜಿನಕವಿಯಲ್ಲ ರಟ್ಟ ನೃಪತುಂಗನುಮಲ್ಲ ಬಲಾಕಪಿಂಛಶಿ
ಷ್ಯನುಮಿವನಲ್ಲ ಪಂಪಕವಿಯಲ್ಲಸಗಂ ವಲಮಲ್ಲ ಶಾಂತಪೊ
ನ್ನನುಮಿವನಲ್ಲ ತೀರ್ಥಕರಪುಣ್ಯಪುರಾಣದ ರಾಜಮಲ್ಲಗಂ
ಗನ ಪಡೆಯಣ್ಣನಲ್ಲಿವನುಮಬ್ಬಿಜಿನಣ್ಣನ ಕೊಂದ ನಾಕಿಯೋ ೭೯

ಜಿನಕವಿ ರನ್ನನಲ್ಲ ಹರಿವಂಶದೊಳಂ ಗುಣವರ್ಮನಲ್ಲ ರು
ದ್ರನ ನುತಿಪಾ ಗಜಾಂಕುಶನುಮಲ್ಲ ದಲಂಗಜಶಾಸ್ತ್ರಿಚಂದ್ರರಾ
ಜನುಮಿವನಲ್ಲ ನಲ್ವಗೆಗೆ ರುದ್ರನ ಪೂಣ್ದು ಪೊಗಟ್ವಿ ಶಂಖವ
ರ್ಮನುಮಿವನಲ್ಲ ಮೇಣಭಿನವಾಭಿಧ ಪಂಪನುಮಲ್ಲನಾರ್ಗಿವಂ ೮೦

ಗುಣದಿಂ ಧರ್ಮಾಮೃತಾಸಾರವನೆ ರಚಿಸಿದನಲ್ಲಂ ದಲಾದಿತ್ಯನಲ್ಲಂ
ಗಣಿತಕ್ಕಂ ಕೀರ್ತಿವರ್ಮಾಂಕನ ಕವಿತೆಯ ಗೋವೈದ್ಯನಲ್ಲಂ ಜಿನಬ್ರಾ
ಹ್ಮಣಧರ್ಮಾಂಭೋಧಿಚಂದ್ರಾಂಕಿತದ ಜನನುಮಲ್ಲಂ ವಲಂ ಕರ್ಣಪಗ್ರಾ
ಮಣಿಯಲ್ಲಂ ವಾಸ್ತುವಾಲೋಕನವಿಧಿಯೊಳಗಂ ನಾಗವರ್ಮಾಂಕನಲ್ಲಂ ೮೧

ಇನಿಬರೊಳಲ್ಲ ದುರ್ಗಕವಿಯಲ್ಲುದೆಗಂ ಗುಣದಿಂ ವಿಲಾಸವ
ರ್ತನನಿವನಲ್ಲ ಹಂಪೆಯ ಹರೀಶ್ವರನಲ್ಲ ಪಥಕ್ಕೆ ರಾಘವಾಂ
ಕನುಮಿವನಲ್ಲ ಪದ್ಮರಸನಲ್ಲ ಜಿನಾಂಬುಧಿಪೂರ್ಣನೇಮಿಚಂ
ದ್ರನುಮಿವನಲ್ಲ ರುದ್ರಕವಿಯಲ್ಲನಿವೆತ್ತಣ ಕಬ್ಬಮಾರ್ಗಿವಂ ೮೨

ಕೆಱೆಯರಸಂಗೆ ನಂದನನುಮಲ್ಲ ದಲಗ್ಗಳನಲ್ಲ ಮತ್ತೆ ಪಾ
ಲ್ಕುಱಿಕೆಯ ಸೋಮನಲ್ಲ ಕವಿರಾಜಣನಲ್ಲಿಯೊ ಕಾಮನಲ್ಲನಿ
ನ್ನಱಿವೊಡೆ ಬಂಧುವರ್ಮನಿವನೇ ಕುಸುಮಾವಳಿಯ ದೇವನೇ ಇದೇ
ತಱಿಕವಿ ಪಾರ್ಶ್ವಪಂಡಿತನುಮಲ್ಲ ಯಶೋಧರ ಜನ್ನನಲ್ಲಿವಂ ೮೩

ಕವಿಯೆನೆ ಸೋಮರಾಜನಿವನೇ ಶಿಶುಮಾಯಣನೇ ಜಿನೇಂದ್ರಕಾವ್ಯಮಾ
ಕವಿಗುಣವರ್ಮನೇ ಪರಮಶಾಂತಿಪುರಾಣದ ಕಂಜಗರ್ಭನೇ
ಇವನಿವನಚ್ಚಗನ್ನಡದೊಳಂಡಯನೇ ವರಮಲ್ಲಿಕಾರ್ಜುನ
ಪ್ರವರನೆ ನೇಮಿತೀರ್ಥಕರಕಾವ್ಯಮಹಾಬಲನೇ ದಲಾರ್ಗಿವಂ ೮೪

ಕವಿಜನ ಕೇಶಿರಾಜನೆಲ್ಲಿ ಕುಮುದೇಂದುವುಮೆಲ್ಲಿ ಹಸ್ತಿಮಲ್ಲನ
ಲ್ಲಿವನಿವನಲ್ಲಿ ರಟ್ಟಕವಿಯಾರಯೆ ನೂತನದಂಡಿಯಲ್ಲಿ ಮೇ
ಳವನಮರಕ್ಕೆ ಟೀಕೆಯೊರೆದನ್ನನುಮೆಲ್ಲಿದೊ ನಾಗರಾಜನ
ಲ್ಲಿವನತಿಸಾರಸಾರದೊಳೆ ಕೇಶವವರ್ಣಿಯುಮಲ್ಲನಾರ್ಗಿವಂ ೮೫

ಜಿನಕವಿ ಮಂಗರಾಜನವನೆಲ್ಲಿದೊ ಭೀಮನುಮೆಲ್ಲಿ ಧರ್ಮನಾ
ಥನ ಚರಿತಕ್ಕೆ ತಕ್ಕ ಮಧುರೋಕ್ತಿಯುಮೆಲ್ಲಿತೊ ಪದ್ಮಣಾಂಕನೋ
ವಿನಯದ ನೂತ್ನ ಮಂಗನಿವನೋ ನಿಜಾ ವೈದ್ಯರ ಚಂದ್ರನೋ ದಿಟ
ಕ್ಕೆನಲಿಟ್ಟಿಕಿಜ್ಜೊಡೆನ್ನ ಕೃತಿಗುನ್ನತಿಯೇಂ ಪವಮಾನನಂದನಾ ೮೬

ಜಿನಸಮಯಕ್ಕೆ ಭಾಸ್ಕರನೊ ಪವಿದೊ ಮಾಧವನಲ್ಲ ತೋಂಟದಾ
ರ್ಯನುಮಿವನಲ್ಲ ಬಾಚರಸನೆಲ್ಲಿದೊ ಮಲ್ಲಣನಲ್ಲ ಚೆನ್ನಮ
ಲ್ಲನುಮಿವನಲ್ಲ ಕಲ್ಲರಸನಲ್ಲ ಗಣೇಶ್ವರನಲ್ಲ ನೀಲಕಂ
ಠನೊ ಚತುರಾಸ್ಯನೋ ಮಲೆಯ ಸಿಂಗಿರಿಯೊ ಚಾಮನೊ ಮಾಯಿದೇವನೋ ೮೭

ಜನನುತ ಹಂಸನಲ್ಲ ಗದಗಾಂಕಿತನಲ್ಲ ಸುಕಾವ್ಯಸಾರದಾ
ತನುಮಿವನಲ್ಲ ಸಾಳ್ವಕವಿಯಲ್ಲ ದಲೀಶ್ವರನಲ್ಲ ಮಂಗರಾ
ಜನುಮಿವನಲ್ಲ ಬಾಹುಬಲಿಯಲ್ಲ ಪುರಂದರನಲ್ಲ ಭಕ್ತಿಯೊಳ್
ಕನಕನುಮಲ್ಲ ಪ್ರತ್ತಿನವನಲ್ಲ ವಿರೂಪನುಮಲ್ಲ ಶೈವರೊಳ್ ೮೮

ಕವಿಯೆನೆ ಸೂರ್ಯನೇ ತಿರುಮಲಾರ್ಯನೆ ಓಜನೆ ಸಿಂಗರಾರ್ಯನೇ
ಶಿವಕವಿಯೇ ಷಡಕ್ಷರಿಯೆ ಅಣ್ಣಯಪುತ್ರನೆ ಬೇಟೆರಾಯನೇ
ಕವಿ ಚಿಕದೇವನೇ ಮಹಿಪ ಚಾಮನೇ ಮೋಣ್ ಮಹಲಿಂಗರಂಗನೇ
ಇವನವಧೂತನಲ್ಲ ಕವಿಗೋಪನೊ ಚಂದ್ರಮನೋ ದಲಾಗ್ಗಿವಂ ೮೯

ಪಯದಿಂದಂ ವತ್ಸಮಂಭೋಜವೆ ಕಮಳಭವಂ ವಾರ್ಧಿಯಿಂ ಚಂದ್ರಮಂ ಗಂ
ಗೆಯಿನಾ ಗಂಗಾತ್ಮಜಂ ದೇವಕಿಯಿನುರಗತಲ್ಪಂ ದಿನಾಧೀಶನೊಂದ
ನ್ವಯದೊಳ್ ಶ್ರೀರಾಮನಂತಂಜನಿಯ ಬಸಿಜನೊಳಾ ಮಾರುಜಂಜೋಲ್
ಕುಮಾರೋ
ದಯವೇನುತ್ಸಾಹದಿಂದಾದಪೆ ಮೇಜಿನಿಯದೆ ತಾತಾನ್ವಯಖ್ಯಾತಿಯೊಂದಂ ೯೦

ಅಯಶಕ್ಕೀಡಾದ ನಿರ್ಲಕ್ಷಣನುಮಶುಭನುಂ ನಿಂದ್ಯನುಂ ನಿಷ್ಫಲ ಪ್ರಾ
ಪ್ತಿಯಿನಾದಂ ಕ್ರೂರನುಂ ಪುಟ್ಟಿದೊಡುದಧಿಗೆ ಹಾಳಾಹಳಂ ಕಾಟ್ಟಿ ದಾವಾ
ಗ್ನಿಯ ಮತ್ತಂ ಕಂಸನಾ ಯಾದವಕುಳದೊಳಗಂ ಪುಟ್ಟುವನ್ನಂ ಕುಮಾರೋ
ದಯದಿಂದೇ ಬಾಟ್ಟಿಯೋ ಮಾಂಜಿಸಲೊಗೆದೊಡೆ ತಾತಾನ್ವಯಖ್ಯಾತಿಯೊಂದಂ

ಎನುತೆನುತೆನ್ನನೆಯ್ದೆ ಪಲವುಂ ಬಗೆಯಿಂದಿಱಿಕೆಯಂ ಭಾವಮೊಂ
ದಿನಿತುಮದಿಲ್ಲ ರೀತಿಯಿನಿತಿಲ್ಲ ರಸಂ ಪ್ರಸತಿಲ್ಲ ಧಾಟಿಯೊಂ
ದಿನಿತುಮದಿಲ್ಲ ಕಬ್ಬದೊಳಗೇತಕೆ ಕಬ್ಬವಿದೆಂಬ ಬಲ್ಲ ಸ
ಜ್ಜನರ ಪರಾಭವಕ್ಕೆ ಗುಱಿಯಪ್ಪುದುಪೊಳ್ಳಿತೆ ಮಾರುತಾತ್ಮಜಾ ೯೨

ಗರುಡಿಯ ಭೀಮನಂ ಕಲಿಯ ಸೋಮನನಾಜಿಯ ರಾಮನಂ ತಿರ
ಸ್ಕರಿಸುವ ಪಾಪದಿಂದೆ ಮಱುಮೆಯ್ಗಮೆ ಸಾಗರ್ಣಮನಾರ್ಯಶಿಕ್ಷಿತಂ
ಗಿರದೆ ದಿವಾಂಧಕತ್ವಮದಱಿಂದಱಿಪ್ಪುಳ್ಳೊಡೆ ದೇವ ನಿನ್ನವಂ
ದಿರೊಳತಿಭಕ್ತಿಯಂ ಮೆಱೆದೊಡಾವ ಭಯಂ ಪವಮಾನನಂದನಾ ೯೩

ಜನಕನನಟ್ಟಿ ಮುನ್ನೆ ಹಿತರುಂ ಸುತರುಂ ತನಗಿಲ್ಲದೊಂದು ವೇ
ದನೆಯೊಳಗಟ್ಟಿನಂ ಬಱಿಕೆ ಶಾಕಿನಿಗೋತ್ರಪಱಿಯಿಂ ದುಃಖಭಾ
ಜನತೆಗೆ ಸಲ್ವನಪ್ಪೊಡೆ ನರಂ ವಿದಿತಂ ತನಗಂ ಸಮಂತು ಮು
ನ್ನಿನ ಭವಮೀ ಭವಂ ಮಱುಭವಂ ವಿಫಲಂ ಪವಮಾನನಂದನಾ ೯೪

ಜನಕನನೋಜನಂ ಪೊರೆವ ರಾಜನನಾಪ್ತನನೇಱಿಪ್ಪೊಂಗೆ ದು
ರ್ಜನರೊಡನಾಡಿಯಾಗವರ ಮಾಡಿದ ಸಲ್ಮೆಯನಂತರಂಗದೊಳ್
ನೆನೆಯದೆ ಕೇಡನೊಂದೆ ಬಗೆಪ್ಪೊಂಗೆನಸುಂ ವಿದಿತಂ ಸಮಂತು ಮು
ನ್ನಿನ ಭವಮೀ ಭವಂ ಮರುಭವಂ ವಿಫಲಂ ಪರವಮಾನನಂದನಾ ೯೫

ಬನವಿದು ಮುನ್ನ ವಿಂದುನಗರಂ ಸುಡುಗಾಡಿದು ಮುನ್ನ ವಿಂದು ಸ
ಜ್ಜನಭವನಂ ದಲೂಪರಮೆ ಮುನ್ನ ವಿದುರ್ವರೆಯಾದುದೀಗಳಿಂ
ಬಿನೆಗವಿಳೇಶರಾಳುತಿರೆ ಸಚ್ಚದ ಸೆಪ್ಮದ ಕೇಡಿಗಂಗೆ ಮು
ನ್ನಿನ ಭವ ಮೀಭವಂ ಮಱುಭವಂ ವಿಫಲಂ ಪವಮಾನನಂದನಾ ೯೬

ತನುವಿನ ರೋಗಮಂ ಕಳೆದೊಡಂ ಬಱಿಸಂ ಪಿರಿದುಂ ನಿವಾರಿಸ
ಲ್ಕಿನಿತೆನಿತುಂಟುಪಾಯಮನಿತಂ ಮನವೊಲ್ದು ನೆಗೞ್ಚಿ ಕಳ್ವರಿಂ
ದಿನಿತುಮುಪಾಯಮಿಲ್ಲದ ಪ್ರೊಲಱ್ತಿಯೆ ಕಾಪೊಡಮೇಱಿಪ್ಪೊಂಗೆ ಮು
ನ್ನಿನ ಭವ ಮೀಭವಂ ಮಱುಭವಂ ವಿಫಲಂ ಪವಮಾನನಂದನಾ ೯೭

ತನಗಿರಲರ್ಥಮಾದ ಕಲಿಗಳ್ಗನಿತುಂ ದೆಸೆಯುಂ ತೊಳಲ್ವ ದೂ
ತನುಮಿರೆ ಮೂಪೆರಬ್ಬಲಿಗೆ ಯೋಜನಲಕ್ಷವನೊಂದೆವೇಳೆಗೊ
ಯ್ಕನೆ ನೆಗೆತರ್ಪ ದೂತನು ಮಿನಿತ್ತುಪಕಾರವನೇಱಿಪ್ಪೊಂಗೆ ಮು
ನ್ನಿನ ಭವ ಮೀಭವಂ ಮಱುಭವಂ ವಿಫಲಂ ಪವಮಾನನಂದನಾ ೯೮

ಅನಿಬರೆಜಾತಿಯೊಂದೆ ಮತವೊಂದೆ ವಲಂ ನುಡಿಯೊಂದೆ ವೇಷವೊಂ
ದೆನಿಸದೊಡಂ ಸಮಂತು ಕಡುನೇಹದೊಳಿರ್ಪುದು ನಾಡೆ ಚೋದ್ಯಮೆಂ
ಬಿನಮರಸಂ ಜನಾಂಗವನಿತಂ ಪೊರೆಯುತ್ತಿರಲೇಂಟಿಪೊಂಗೆ ಮು
ನ್ನಿನ ಭವ ಮೀಭವಂ ಮುಟಿಭವಂ ವಿಫಲಂ ಪವಮಾನನಂದನಾ ೯೯

ಮನವೊಸೆದಂತೆ ಸಾರ್ದು ಪಲವುಂ ಪುರಮಂ ತಮಗೊಲ್ದ ದೇವಮಂ
ದನೆಯುನೊಡರ್ಚ್ಚಿ ತಮ್ಮ ಜನಕೋಲೆಯುನರ್ಥಮನಟ್ಟೆ ಬೇಗಮೆಂ
ತೆನೆಯೆನೆ ನಲ್ಮೆಯಂ ಪ್ರಜೆಗೆ ಮಾಡೆಯುಮೋಟಿಸುವೊಂಗೆ ತನ್ನ ಮು
ನ್ನಿನ ಭವ ಮೀಭವಂ ಮುಟಿಭವಂ ವಿಫಲಂ ಪವಮಾನನಂದನಾ ೧೦೦

ತನತನಗೊಲ್ದ ಮಾರ್ಗದೆ ಪಣಂ ಪಿರಿದಿಲ್ಲದೆ ಚೋರಭೀತಿಯಿ
ಲ್ಲೆನೆ ಪಯಣಕ್ಕೆ ತಕ್ಕನಿತು ಸೌಖ್ಯಮುಮಿರ್ದೊಡೆ ದಿವ್ಯದೇಶಮಂ
ಜನನುತಮಪ್ಪ ಠಾಣಮುಮನಾದಮೆ ನೋಡಿಯಮೇಟಿಪೊಂಗೆ ಮು
ನ್ನಿನ ಭವ ಮೀಭವಂ ಮುಟಿಭವಂ ವಿಫಲಂ ಪವಮಾನನಂದನಾ ೧೦೧

ಜನಪದದಲ್ಲಿ ಪಳ್ಳಿಯಿವು ಪಟ್ಟಣಮಿಂತಿವು ನಾಡಿವೆಂದೊಡಂ
ಧನಿಕರಿವರ್ ದರಿದ್ರರಿವರೆನ್ನದೆ ಕಲ್ಪವರ್ಗೆಲ್ಲಿಯುಂ ಕಲಾ
ವನಮನಲೋದೆ ಶಾಲೆಗಳನಿಟ್ಟಕಳಂಕನನೇಟಿಪೊಂಗೆ ಮು
ನ್ನಿನ ಭವ ಮೀಭವಂ ಮುಟಿಭವಂ ವಿಫಲಂ ಪವಮಾನನಂದನಾ ೧೦೨

ಇನಿವಿರಿದೊಂದು ಸೌಖ್ಯಮುಮೊಡಂಬಡುಮಟ್ತಿಯುಮಾನುಕೂಲ್ಯಮುಂ
ತನಗಿರೆ ತನ್ನ ತಕ್ಕ ಕಲೆಯಂ ಮತಮಂ ಶ್ರುತಮಂ ನಿದಾನದಿಂ
ದೆನಿತನಿತಂ ಪ್ರವೀಣತೆ ವರಂ ಕಲಲೊಲ್ಲದ ಗಾಂಪನೊಂದು ಮು
ನ್ನಿನ ಭವ ಮೀಭವಂ ಮುಟಿಭವಂ ವಿಫಲಂ ಪವಮಾನನಂದನಾ ೧೦೩

ಗುರುವರಬೋಧೆಯೊಳ್ ಮಹಿಪನೀತಿಯೊಳಣ್ಮೆನೊಳಾರ್ಜಿನೊಳ್ ಶಿವಂ
ಕರನುತಿಯೊಳ್ ಕಲಾಗಮತೆಯೊಳ್ ಹಿತದೊಳ್ ಶ್ರುತದೊಳ್ ನಿದಾನದೊಳ್
ಸುರನರನಾಗರುಂ ನಿನಗೆ ಸಾಟಿಯೆ ನಿನ್ನ ಸಮಕ್ಕೆ ನೀನೆಯೆಂ
ದೊರೆಯುದರುಂಟೆ ಲೋಕದೊಳಗಿಂದ್ರನರೇಂದ್ರ ಫಣೇಂದ್ರವಂದಿತಾ ೧೦೪

ಪರಮಯತೀಂದ್ರನಾ 'ಮಧುರವಾಣಿ'ಯ ಬೋಧೆಗೆ ಪೂಣ್ದು ಶೀಲವಂ
ತರ ನಡೆಗೊಲ್ದು ಸದ್ವ್ರತಕೊಡಂಬಡೆ ನೋಂಪಿಯನೆಯ್ದೆ ನೋಂತಮಂ
ಗಿರದಜಿನಂ ಗುಣೋದಯಮನೀಪ್ಸಿತಭದ್ರಮನಿತ್ತು ಕಾವ ದೇ
ವರವರಮೋ ವರಂ ಕಡೆವರಂ ಜನನಾಂಬುಧಿ ಶೋಷಣಂಬರಂ ೧೦೫

ಮುಖ್ಯಪ್ರಾಣಾಂತರ್ಗತ ಶ್ರೀರಾಮಚಂದ್ರಾರ್ಪಣಮಸ್ತು.

## ಪ್ರತಿಷ್ಠಾನ ವಾರ್ತೆ

### ದಶಮಾನೋತ್ಸವ ಉದ್ಘಾಟನಾ ಸಮಾರಂಭ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಮೇ 6, 1989ಕ್ಕೆ 10 ವರ್ಷಗ ತುಂಬಿದವೆಂದು ತಿಳಿಸಲು ಸಂತೋಷವೆನಿಸುತ್ತದೆ. ಈ ಶುಭ ಸಂದರ್ಭದಲ್ಲಿ 198 ರಿಂದ 90ರವರೆಗೆ ಇಡೀ ವರ್ಷ ದಶಮಾನೋತ್ಸವ ವರ್ಷವನ್ನಾಗಿ ಆಚರಿಸ ಉದ್ದೇಶಿಸಿ ಗ್ರಂಥ ಪ್ರಕಟನೆ, ದಶವಾರ್ಷಿಕ ಸಂಶೋಧನಾ ಸಾಹಿತ್ಯ ಸಮೀಕ್ಷಾ ವಿಚಾ ಗೋಷ್ಠಿಗಳು, ಹಸ್ತಪ್ರತಿಶಾಸ್ತ್ರ ಶಿಕ್ಷಣ ತರಗತಿಗಳನ್ನು ನಡೆಸುವುದು, ಪ್ರತಿಷ್ಠಾ ದಲ್ಲಿರುವ ಹಸ್ತಪ್ರತಿಗಳ ಪ್ರದರ್ಶನ, ಶಾಶ್ವತ ನಿಧಿ ಸ್ಥಾಪನೆ ಇತ್ಯಾದಿ ಕೆಲ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ.

ಈ ದಶಮಾನೋತ್ಸವ ಕಾರ್ಯಕ್ರಮದ ಉದ್ಘಾಟನಾ ಸಮಾರಂಭ ಇತ್ತೀಚ ಅಂದರೆ 11-6-89 ರಂದು ನಗರದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯು ನಡೆಯಿತು. ಡಾ॥ ವಿ. ಕೃ. ಗೋಕಾಕ್ ಅವರು ಅತ್ಯಂತ ಸಂತೋಷದಿಂ ಉದ್ಘಾಟನೆ ಮಾಡಿದ ಈ ಕಾರ್ಯಕ್ರಮದಲ್ಲಿ ಪ್ರತಿಷ್ಠಾನವನ್ನು ಉದ್ಘಾಟನೆ ಮಾಡಿ ರಾಷ್ಟ್ರಕವಿ ಕುವೆಂಪು ಅವರ ಮತ್ತು ಪ್ರತಿಷ್ಠಾನದ ಪ್ರಥಮ ಅಧ್ಯಕ್ಷರಾಗಿದ್ದ ಶ್ರ ನಿಟ್ಟೂರು ಶ್ರೀನಿವಾಸರಾವ್ ಅವರ ಭಾವಚಿತ್ರಗಳನ್ನು ಅನಾವರಣ ಮಾಡಲಾಯಿತ

ಕುವೆಂಪು ಅವರ ಭಾವಚಿತ್ರವನ್ನು ಉದಾರವಾಗಿ ದಾನ ಮಾಡಿದ್ದ ಡಾ॥ ಪ್ರಭ ಶಂಕರ ಅವರೇ ಅದನ್ನು ಅನಾವರಣ ಮಾಡಿದರು. ಶ್ರೀ ನಿಟ್ಟೂರು ಅವರ ಭಾವ ಚಿತ್ರವನ್ನು ನ್ಯಾಯಮೂರ್ತಿ ಶ್ರೀ ಡಿ. ಎಂ. ಚಂದ್ರಶೇಖರ್ ಅವರು ಅನಾವರ ಮಾಡಿದರು. ಈ ಭಾವಚಿತ್ರವನ್ನು ಶ್ರೀ ನಿಟ್ಟೂರರ ಪುತ್ರರಾದ ಶ್ರೀ ಎನ್. ಎಸ್ ಚಂದ್ರಶೇಖರ್ ಮತ್ತು ಎನ್. ಎಸ್. ಸುಬ್ಬಣ್ಣ ಅವರುಗಳು ದಾನವಾಗಿ ನೀಡಿದ್ದಾರ

ಈ ಸಂದರ್ಭದಲ್ಲಿ ದಶಮಾನೋತ್ಸವ ಕೃತಿಮಾಲೆಯಲ್ಲಿ ಪ್ರಕಟಿಸಬೇಕೆಂದಿರು ಹತ್ತು ಉಪಯುಕ್ತ ಗ್ರಂಥಗಳಲ್ಲಿ ಮೊದಲನೆಯದಾಗಿ ಡಾ॥ ಪ್ರಧಾನ ಗುರುದತ ಅವರು ಬರೆದುಕೊಟ್ಟಿರುವ 'ಭಾಷಾಂತರ ಕಲೆ' ಎಂಬ ಗ್ರಂಥವನ್ನು ಬಿಡುಗ ಮಾಡಲಾಯಿತು. ಈ ಗ್ರಂಥಗಳ ಪ್ರಕಟನೆಗೆ 50 ಸಾವಿರ ರೂ.ಗಳ ಧನಸಹಾಯ ವನ್ನು ಉದಾರವಾಗಿ ಕೊಡಮಾಡಿರುವ ಸರ್ಕಾರದ ಕನ್ನಡ ಮತ್ತು ಸಂಸ್ಕೃ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ಐ. ಎಂ. ವಿಠಲಮೂರ್ತಿ ಅವರ ಬಿಡುಗಡೆ ಮಾಡಿದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ರಾಜ್ಯದ ಶ್ರೇಷ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಎಂ. ರಾಮಾಜೋಯಿಸ್ ಅವರು ವಹಿ ದರು. ಪ್ರಾರಂಭದಲ್ಲಿ ದಶಮಾನೋತ್ಸವ ಸಮಿತಿಯ ಕಾರ್ಯಾಧ್ಯಕ್ಷರೂ ಪ್ರತಿಷ್ಠಾನ ಅಧ್ಯಕ್ಷರೂ ಆದ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಸ್ವಾಗತಮಾಡಿದರು ಸಮಿತಿಯ ಅಧ್ಯಕ್ಷರಾದ ಜಿ. ನಾರಾಯಣ ಅವರು ಉತ್ಸವದ ಯೋಜನೆಗಳನ್ನು ವಿವರಿಸಿದರು. ಪ್ರತಿಷ್ಠಾನದ ಕಾರ್ಯದರ್ಶಿಗಳಾದ ಪ್ರೊ॥ ಎಂ. ವಿ. ಸತ್ಯನಾರಾಯಣ ಅವರು ಕಾರ್ಯಕ್ರಮವನ್ನು ನಿರ್ವಹಣೆ ಮಾಡಿದರು.

# ಇತರ ಪ್ರಕಟನೆಗಳು

(ಇವುಗಳ ಮಾರಾಟದಿಂದ ಬಂದ ಹಣ ಪ್ರತಿಷ್ಠಾನದ ನಿಧಿಗೆ ಸೇರುತ್ತದೆ.)

1. ಅಧ್ಯಯನ (ಡಾ॥ ಶಂ. ಬಾ. ಜೋಶಿ ಅಭಿನಂದನ ಗ್ರಂಥ) 50-00
   (ಡಾ॥ ಶಂ. ಬಾ. ಜೋಶಿ ಅಭಿನಂದನ ಸಮಿತಿ ಕೊಡುಗೆ)
2. ಕವಿಜಿಹ್ವಾಬಂಧನ (ಶ್ರೀಮತಿ ಕೆ. ಶಾಂತ ಅವರ ಕೊಡುಗೆ) 2-00
3. ಆಸ್ವಾದ (ಪ್ರೊ॥ ಎಂ.ವಿ.ಸೀ. ಅಭಿನಂದನ ಗ್ರಂಥ) 75-00
4. ಕಾಣಿಕೆ (ಕವನ ಸಂಕಲನ) 5-00
5. ಹಳೆ ಬೇರು ಹೊಸ ಚಿಗುರು (ಕವನ ಸಂಕಲನ) 5-00
6. ಪಟ್ಟಬಂಧ (ನಾಟಕ) ವಿ.ಸೀ. 6-00
7. ಪ್ರೊ॥ ಎಂ.ವಿ.ಸೀ. ಅವರ ಪುಸ್ತಕಗಳು :
   1. ಕವಿಯ ಹೆಂಡತಿ (ನಾಟಕ) 2-00
   2. ಸ್ವಯಂವರ (ನಾಟಕ) 2-00
   3. ಸ್ನೇಹದ ಕಾಣಿಕೆ (ಕಾದಂಬರಿ) 3-00
   4. ಕನ್ನಡಮ್ಮನ ಕೊರಗು 8-00
   5. ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು 5-00
   6. ರಾಘವ ಕವನ ಕೋಶ (7, 8, 9ರ ಕವನಗಳ ಸಂಗ್ರಹ) 20-00
   7. ಗೀತಭಾರತಿ 5-00
   8. ಹಂಸಪಥ 10-00
   9. ಮುಗಿಯದ ಮಾಯೆ 5-00
   10. ನಿಲ್ದಾಣಗಳ ನಡುವೆ (ಕಥಾಸಂಗ್ರಹ) 20-00

   [ಸೆಟ್‌ಗೆ 6 ಅಥವಾ 7, 8, 9ನ್ನು ಕೊಡಲಾಗುತ್ತದೆ]

   ಸೆಟ್‌ಗೆ 35-00
8. ನಾಡೋಜ ಬಿ.ಎಂ.ಶ್ರೀ. 5-00

## ಸಿದ್ಧತೆಯಲ್ಲಿ

1. ಶ್ರೀ ಕೃಷ್ಣಬಾಲಲೀಲೆ : ಭಾಗ 2 (ಅಚ್ಚಿನಲ್ಲಿ) 75-00
   (ತಿಮ್ಮಪ್ಪದಾಸರ ಕೀರ್ತನ ರೂಪದ ಭಾಗವತ ಗ್ರಂಥ)
2. ರಸಮಂಜರಿ (ಜಾಯೇಂದ್ರನ ಲಕ್ಷಣ ಗ್ರಂಥ)
3. ಕುಮಾರವ್ಯಾಸ ಭಾರತ ಸಂಗ್ರಹ
4. ವಿಜಯನಗರ ಪೂರ್ವೇತಿಹಾಸ

---

Published by M. V. Satyanarayana, Honorary Secretary, on behalf of B.M.Sri. Memorial Foundation, Bangalore-560019; Editor: Vidwan T. Keshava Bhat; Printed at Sri Lakshmi Printers, Near Kattharaguppa, Banashankari Third Stage, Bangalore-560085.

# ಪ್ರತಿಷ್ಠಾನದ ಪ್ರಕಟನೆಗಳು

1. ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ) 50-00
2. ಬೇಂದ್ರೆ ಸ್ಮೃತಿ (ಸಾಹಿತ್ಯ ಭಂಡಾರದಲ್ಲೂ ದೊರೆಯುತ್ತದೆ) 5-00
3. ಸರ್ವಜ್ಞ ವಚನಗಳು* 15-00
4. ಸೂತ ಭಾರತ* 15-00
5. ಶ್ರೀಕೃಷ್ಣದೇವರಾಯ ದಿನಚರಿ* 10-00
6. ಹಸ್ತಪ್ರತಿ ಶಾಸ್ತ್ರ* 15-00
7. ಮಾಸ್ತಿ ಸ್ಮರಣೆ 15-00
8. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ—ಭಾಗ-೧* 20-00

## ದತ್ತಿ ಉಪನ್ಯಾಸ ಮಾಲೆ

9. ಮೂರು ದತ್ತಿ ಉಪನ್ಯಾಸಗಳು 10-00
10. ವೈವಸ್ವತ ಮನು 5-00
11. ಸ್ವಾಯಂಭುವ ಮನು : ವೈವಸ್ವತ ಮನು – ತೌಲನಿಕ ಅಧ್ಯಯನ 5-00
12. ಮೂರು ದತ್ತಿ ಉಪನ್ಯಾಸಗಳು—೧೯೮೪ 10-00
13. ದತ್ತಿ ಉಪನ್ಯಾಸಗಳು—೧೯೮೬ 10-00

## ತಿಮ್ಮಪ್ಪದಾಸ ಪ್ರಕಾಶನ ಮಾಲೆ

14. ಕೀರ್ತನ ಕುಸುಮಾಂಜಲಿ 10-00
15. ಧ್ರುವ ಚರಿತ್ರೆ* 15-00
16. ಶ್ರೀ ಕೃಷ್ಣಬಾಲಲೀಲೆ ಭಾಗ-೧* 75-00
17. ,, ಭಾಗ-೨* 75-00

## ಶ್ರೀ ಜನ್ಮಶತಾಬ್ದಿ ಕೃತಿಮಾಲೆ

18. ಶ್ರೀವಾಣಿ (ಸೂಕ್ತಿ ಸಂಗ್ರಹ) 1-00
19. ಆಚಾರ್ಯ ಬಿ.ಎಂ.ಶ್ರೀ. (ಜೀವನ ಚಿತ್ರ) 2-00
20. ಕನ್ನಡ ಕಣ್ವ ಬಿ.ಎಂ.ಶ್ರೀ. (ಮಕ್ಕಳಿಗೆ) 1-00
21. ಶ್ರೀಯವರ ಆಯ್ದ ಕವನಗಳು 2-00
22. ಶ್ರೀನಿಧಿ (ಸಂಸ್ಮರಣ ಸಂಪುಟ) 60-00
23. B.M.S. : The Man and His Mission 25-00
24. ಶ್ರೀಗಂಧ (ಸಂಸ್ಮರಣ ಸಂಚಿಕೆ) 10-00
25. ಇಂಗ್ಲಿಷ್ ಗೀತಗಳು (ಆಂಗ್ಲ ಮೂಲ ಕವನಗಳೊಂದಿಗೆ) 20-00
26. The Improvement of Kannada—3.M.Sri. 6-00
27. ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯ 4-00
28. ಭಾರತದ ಶ್ರೀಕೃಷ್ಣ 6-00
29. ಅಶ್ವತ್ಥಾಮ ('ಶ್ರೀ' ನಾಟಕದ ಸರಳಾನುವಾದ) 6-00
30. Early Vijayanagara : Studies in History & Culture 60-00
31. ಮರುನ್ನಂದನ ಶತಕಂ 5-00

* ಈ ಪುಸ್ತಕಗಳಿಗೆ ಪ್ರತಿಷ್ಠಾನದ ಸದಸ್ಯರಿಗೆ ಶೇ. 50 ರಿಯಾಯಿತಿ.